

ಕೂಗಿದರು ಧ್ವನಿ ಕೇಳದೇ ಶಿರ
ಬಾಗಿದರು ದಯೆ ಬಾರದೇ ॥ ಪ ॥

ಭೋಗಿಶಯನ ಭುವನಾಧಿಪತೇ ನಿನ್ನ
ಆಗಮವೆಂದಿಗೆ ಆಗುವುದೋ ಪ್ರಭೋ ॥ ಅ.ಪ ॥

ಭಕ್ತರಿಗೊಲಿದವ ನೀನು ಖರೆ ಎನ್ನ
ಅತ್ತ ನೋಡುವುದು ಯಾಕೆ ದೊರೆ
ಚಿತ್ತವು ಧ್ಯಾನ ಪರಾಕು ಮಹಾಪ್ರಭು
ಎತ್ತರಣ ರಥವದು ಎತ್ತಿ ಬಿಸಾಡಲು ದೊರೆ 1

ಸಿಂಧುಶಯನ ಶೇಷಾದ್ರಿವರ ಸಿರಿ
ಮಂದಿರ ಕುಟುಂಬ ಭರ
ಸುಂದರ ಮೂರುತಿ ಒಂದಿನ ಸ್ವಪ್ನದಿ
ಬಂದು ಪದದ್ವಯ ಚೆಂದದಿ ತೋರಿಸೋ 2

ಕರುಣಾಶರಧಿಯು ನೀನಲ್ಲೇ ಕೃಷ್ಣ
ಶರಣಾಗತರಿಗೆ ದೊರೆಯಲ್ಲೇ
ಮೊರೆ ಹೊಕ್ಕವರಿಗೆ ಮರೆಯಾಗುವರೇ
ಸರಿಯೆ ನಿನಗಿದು ವಿಜಯ ವಿಠಲರಾಯ 3

– ಶ್ರೀ ವಿಜಯದಾಸರು

ಸಂದರ್ಶಿಸಿ ಆನಂದಿಸಿ

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ

# ತಿರುಚಾನೂರು



## ವಾರ್ಷಿಕ ಬ್ರಹ್ಮೋತ್ಸವಗಳು

**18-11-84 ರಿಂದ 27-11-84 ವರೆಗೆ**

**ಕಾರ್ಯಕ್ರಮ ವಿವರ**

| ದಿನಾಂಕ | ವಾರ | ಹಗಲು ಉತ್ಸವ | ರಾತ್ರಿ ಉತ್ಸವ |
|---|---|---|---|
| 18–11–84 | ಭಾನು | — | ಸೇನಾಪತಿ ಉತ್ಸವ, ಅಂಕುರಾರ್ಪಣೆ |
| 19–11–84 | ಸೋಮ | ಧ್ವಜಾರೋಹಣ | ಚಿಕ್ಕ ಶೇಷವಾಹನ |
| 20–11–84 | ಮಂಗಳ | ಟಾಂಜಾನ್ ಉತ್ಸವ | ಹಂಸವಾಹನ |
| 21–11--84 | ಬುಧ | ಸಿಂಹವಾಹನ | ಮುತ್ತಿನ ಚಪ್ಪರವಾಹನ |
| 22–11–84 | ಗುರು | ಕಲ್ಪವೃಕ್ಷವಾಹನ | ಸರ್ವಭೂಪಾಲವಾಹನ |
| 23–11–84 | ಶುಕ್ರ | ಪಲ್ಲಕಿ ಉತ್ಸವ | **ಗಜವಾಹನ** |
| 24–11–84 | ಶನಿ | ಹನುಮದ್ವಾಹನ, ಸಂಜೆ : ವಸಂತೋತ್ಸವ | ಗರುಡೋತ್ಸವ |
| 25–11–84 | ಭಾನು | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ |
| 26–11–84 | ಸೋಮ | **ರಥೋತ್ಸವ** | ಅಶ್ವವಾಹನ |
| 27–11–84 | ಮಂಗಳ | ಪಲ್ಲಕಿ ಉತ್ಸವ, ಚಕ್ರಸ್ನಾನ | ಧ್ವಜಾವರೋಹಣ |

ಸೂಚನೆ : ಮೇಲ್ಕಂಡ ದಿನಗಳಲ್ಲಿ ದಿನವೂ ಸಾಂಸ್ಕೃತಿಕ ಕಾರ್ಯಕ್ರಮಗಳಿರುತ್ತವೆ. ತಿರುಪತಿಯಿಂದ ತಿರುಚಾನೂರಿಗೆ ಹತ್ತು ನಿಮಿಷದ ವಾಹನಹಾದಿಯಷ್ಟೆ ಅಲ್ಲದೆ. ವಿಶೇಷ ವಾಹನ ಸೌಕರ್ಯಗಳುಂಟು.

**ತಿರುಮಲೆ ತಿರುಪತಿ ದೇವಸ್ಥಾನಗಳು.**

**ನೀವೂ ಬನ್ನಿ, ನಿಮ್ಮವರನ್ನೂ ಕರೆತನ್ನಿ.**



ಗೌರವ ಸಂಪಾದಕರು :
ಜಿ. ಕುಮಾರಸ್ವಾಮಿರೆಡ್ಡಿ ಐ.ಎ.ಎಸ್.,

ಸಂಪಾದಕ :
ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ :
ಬಿ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ :
ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**



ಸಂಪುಟ ೧೫] ಅಕ್ಟೋಬರ್ ೧೯೮೪ [ಸಂಚಿಕೆ ೫

# ವಿಷಯಸೂಚಿ



ರಕ್ಷಾಪತ್ರ ಚಿತ್ರಗಳು :

ಮುಖಪುಟ : ಮಹಿಷಾಸುರ ಮರ್ದಿನಿ ಚಿತ್ರ : ಕೆ. ಜಗದೀಶ್

ಹಿಂಬದಿಯಲ್ಲಿ : ತಿರುಚಾನೂರು ಬಂಗಾರದ ಆಲಯ ವಿಮಾನ

ಒಳಪುಟಗಳಲ್ಲಿ : ತಿರುಮಲೆಯ ಬ್ರಹ್ಮೋತ್ಸವದ ಊಂಜಲ್ ಸೇವೆ ಹಾಗೂ ಚಕ್ರಸ್ನಾನ




ಹಾಡಿದ್ದೇ ಹಾಡುತ್ತಾನೆ ಎಂದು ಗೊಣಗಬಹುದು. ಹಾಡಿದ್ದೇ ಹಾಡಿದರೂ ಹಾಡಿನ ನಾಡಿ ಬೇರೆ ಅದರ ಮಿಡಿತ ಬೇರೆ. ಅದರ ಅನುಭೂತಿ ಬೇರೆ ಎಂಬುದು ಹಾಡುವವರಿಗೂ ಕೇಳುವವರಿಗೂ ಗೊತ್ತಿರುವುದೇ ಆಗಿದೆ. ಎಂದರೆ ತಾತ್ಪರ್ಯ ಹಾಡಬೇಕಾಗಿ ಬಂದಾಗ ಹಾಡಿದ್ದನ್ನೇ ಮತ್ತೆ ಹಾಡಿದರೂ ತಪ್ಪಿಲ್ಲ.

ಈ ಮೀಮಾಂಸೆಯೂ ಸಹ ಇಂದಿನದೇನಲ್ಲ. ಹಳೆಯದನ್ನು ಹಿಂದೆಹಾಕಿ ಹೊಸದಕ್ಕೆ ಕೊಡೆ ಹಿಡಿಯುವ ಮಂದಿ ಬಹಳವಿದ್ದರೂ ಹಳೆಯ ತಳಹದಿಯಿಲ್ಲದೆ ಹೊಸಕೋಟೆಯೇಳದು ಎಂಬುದು ಸಹಜವೇ ಆಗಿದೆ. ಕೇಳಿಲ್ಲವೇ 'ಹಳೆ ಬೇರು ಹೊಸಚಿಗುರು ಕೂಡಿರಲು ಮರ ಸೊಬಗು...

ಪ್ರಾಚೀನ ಮಹರ್ಷಿಗಳು, ದ್ರಷ್ಟಾರರು ಅಂತರ್ಮಥನದಿಂದ ಮುಂದಿನ ತಲೆಮಾರುಗಳಿಗೆ ನೀಡಿದ ಅಮೃತ ಕಲಶಗಳೇ ಇಂದಿನ ನವಸಾಹಿತ್ಯ ಮಯೂರಲಾಸ್ಯ. ಮಹಾತ್ಮರು ಸೂತ್ರಪ್ರಾಯವಾಗಿಯೋ, ಸಂಕ್ಷಿಪ್ತವಾಗಿಯೋ ಹೇಳಿದ್ದನ್ನು ನಮ್ಮ ಮಾನಸಿಕ ಬೌದ್ಧಿಕ ಶಕ್ತಿಗಳಿಗನುಗುಣವಾಗಿ ವ್ಯಾಖ್ಯಾನ ಮಾಡಿಕೊಂಡು ನಮ್ಮ ರಾಷ್ಟ್ರ ನಂದನವನವಾಗಿ ಪರಿವರ್ತನೆ ಹೊಂದಬೇಕೆಂದು ಪ್ರಯತ್ನ ಪಟ್ಟಿವು. ರಾಮಾಯಣ, ಭಾರತ, ಭಾಗವತಗಳಿಗೆ ಎಷ್ಟೊಂದು ವಿವರಣೆಗಳು ಎಷ್ಟೊಂದು ಭಾಷೆಗಳಲ್ಲಿ ಬಂದಿವೆ ಎಂಬುದನ್ನು ಪಟ್ಟಿ ಮಾಡಬೇಕಾಗಿಲ್ಲ. ಭಾಸ, ಭಾರವಿ, ಕಾಳಿದಾಸ, ಮೊದಲಾದವರೆಲ್ಲರ ಕಾವ್ಯ, ನಾಟಕ, ಮೂಲ ಸತ್ತ್ವವೆಲ್ಲ ನಮ್ಮ ಪರಂಪರೆಯಿಂದಲೇ ಬಂದವುಗಳು. ಇದು ನಿರಂತರ ಸ್ರೋತವಾಗಿ ಮುಂದುವರಿಯುತ್ತಿದೆಯೆಂದರೆ ನಿನ್ನೆಯಿಲ್ಲದೆ ಇಂದಾಗಲೀ ನಾಳೆಯಾಗಲೀ ಇರಲಾಗದು ಎಂಬ ಸತ್ಯವೇ ಕಾರಣವಾಗಿದೆ. ಮಹಾಮಾನವರಾದ ಮಹರ್ಷಿಗಳು ನಾಳಿನ ಜೀವರಿಗೆ ನೀಡಬೇಕಾದ ಸಂದೇಶಗಳನ್ನು ಬಹುಹಿಂದೆಯೇ ಭದ್ರಗೊಳಿಸಿಟ್ಟರು. ನಿಜವೆಂದರೆ ಮಹಾಭಾರತಕ್ಕೆ 'ಇಲ್ಲಿರುವುದು ಎಲ್ಲ ಕಡೆಯೂ ಇದೆ ಇಲ್ಲಿಲ್ಲದ್ದು ಎಲ್ಲಿಯೂ ಇಲ್ಲ' ಎಂಬ ಮಾತು ಬಂದಿದೆಯೆಂದರೆ ಅದರ ಮಹತ್ತ್ವವನ್ನು ಅರಿಯಬಹುದು. ಇನ್ನು ಭಾಗವತದ ಬಗ್ಗೆ ಹೇಳಬೇಕಿಲ್ಲ. ಮಧುರ ಭಕ್ತಿ ಸಿದ್ಧಾಂತ ಆ ಕಲ್ಪತರುವಿನಿಂದ ಬಂದದ್ದೇ. ಒಂದೊಂದು ಕಥೆಯೂ ಒಂದೊಂದು ಹೊಸ ಅರ್ಥವನ್ನು ಪಡೆದಿದೆ. ಹೊಸ ಅಭಿವ್ಯಕ್ತಿಗೆ ಬಟ್ಟೆಗೊಟ್ಟಿದೆ.

ಇಂತಲ್ಲಿ ದೀಪಾವಳಿ ಸಂದರ್ಭವಾಗಿ ಹೇಳುವ ನರಕ ವ್ಯಥೆಯ ಕಥೆ, ಇದೊಂದು ರೀತಿಯಲ್ಲಿ ಜೀವ ಸಂಸಾರ ಬಂಧವನ್ನು ಛೇದಿಸುವಲ್ಲಿ, ಭಗವಂತನ ಕಾರ್ಯರೀತಿಯನ್ನು ಸ್ಫುಟವಾಗಿ ವಿವರಿಸುತ್ತದೆ. ಕಥೆ ನಡೆದು ಬಹುಕಾಲವಾದರೂ ತಲೆಮಾರುಗಳಿಂದ ನಡೆದು ಬಂದ ಈ ನರಕಕಥೆ ನಾಶವಾಗುವವರೆಗೆ ತಪ್ಪುವುದಿಲ್ಲ. ಇದನ್ನು ತಿಳಿದವರಿಗೆ ಹೇಳಬೇಕಿಲ್ಲ.

ಪ್ರಕೃತ ದೀಪಾವಳಿಯ ಶುಭ ಸಂದರ್ಭದಲ್ಲಿ ನಮ್ಮ ವಾಚಕ, ಏಜಂಟ್, ಜಾಹೀರಾತುದಾರರಿಗೆಲ್ಲ ಶುಭವನ್ನು ಹಾರೈಸುತ್ತ, ಪರಂಪರೆಯ ಕಥೆಯಲ್ಲಿನ ಸಾರ್ವಕಾಲಿಕ ಮೌಲ್ಯವನ್ನು ಗುರುತಿಸಿಕೊಂಡು ಸನ್ಮಾರ್ಗ ಪ್ರವೃತ್ತಿಯ ಆಸಕ್ತಿಯನ್ನು ಹುಟ್ಟಿಸಲು ಆ ಪುರುಷೋತ್ತಮನನ್ನು ಮತ್ತೊಮ್ಮೆ ಪ್ರಾರ್ಥಿಸುವ.

# ಕವಿಗಳು ಕಂಡ ದೈವಸಮನ್ವಯ

ಭಾರತೀಯ ಸಂಸ್ಕೃತಿಯ ಮುಖ್ಯ ಲಕ್ಷಣಗಳಲ್ಲಿ ಒಂದಾದ ಸರ್ವಧರ್ಮ ಸಮನ್ವಯತೆಯನ್ನು, ಬೇರೆ ಬೇರೆ ಕಾಲಗಳಲ್ಲಿ ಹಲವು ವಿಭೂತಿ ಪುರುಷರು ಪ್ರಚುರ ಪಡಿಸಿದಂತೆ, ಕವಿಗಳು ಕೂಡ ತಮ್ಮ ಸಾಹಿತ್ಯದಲ್ಲಿ ಸಾರಿರುವ ಉದಾಹರಣೆಗಳಿವೆ. ವೇದಕಾಲದಿಂದ ಇದುವರೆಗೆ ಯಾವುದೇ ಧಾರ್ಮಿಕ ಗ್ರಂಥಗಳು ಧರ್ಮದ ನೆಪದಲ್ಲಿ ಜಗಳವಾಡಿ ಎಂದು ಉಪದೇಶಿಸಿದ್ದು ಕಂಡುಬರುವುದಿಲ್ಲ. ನಾವು ಒಟ್ಟಿಗೆ ಕೂಡೋಣ, ಒಟ್ಟಿಗೆ ಬಾಳೋಣ, ಸಮಸ್ತಜನರಿಗೂ ಸುಖ, ಶಾಂತಿ ಲಭಿಸಲಿ, ನಮ್ಮನ್ನು ಕಾಪಾಡುವ ದೇವನೊಬ್ಬನೆ, ಇತ್ಯಾದಿ ಅರ್ಥಗಳನ್ನು ಕೊಡುವ ಮಂತ್ರಗಳು ವೈದಿಕಸಾಹಿತ್ಯದಲ್ಲಿ ವಿಪುಲವಾಗಿವೆ. ಭರತಖಂಡದಲ್ಲಿ ಹುಟ್ಟಿಕೊಂಡ ಜೈನ, ಬೌದ್ಧ, ಶೈವ, ವೈಷ್ಣವ, ಕಾಳಾಮುಖ, ಗಾಣಪತ್ಯ, ಸಿಕ್ ಧರ್ಮಗಳಲ್ಲದೆ, ವಿದೇಶದಿಂದ ಬಂದ ಕ್ರೈಸ್ತ, ಇಸ್ಲಾಂ ಮತೀಯರೂ ಸಹ ಬಾಳ್ವೆಯನ್ನು ನಡೆಸುವ ನಿದರ್ಶನಗಳು ನಮ್ಮಲ್ಲಿವೆ. ಹಿಂದುಗಳು ಮುಸ್ಲಿಂ ಮಂದಿರಗಳಿಗೂ, ಮುಸ್ಲಿಮರು ಹಿಂದೂಮಂದಿರಗಳಿಗೂ ಹರಕೆ ಸಲ್ಲಿಸುವ ಪದ್ಧತಿ ದೇಶದ ಹಲವೆಡೆಗಳಲ್ಲಿವೆ. ಚರಿತ್ರೆಯನ್ನವಲೋಕಿಸಿದಾಗ ಅನ್ಯಮತೀಯ ಧಾರ್ಮಿಕ ಕೇಂದ್ರಗಳಿಗೆ ದಾನ, ದತ್ತಿಗಳನ್ನು ಬಿಟ್ಟ ಅರಸರ ಕತೆಗಳು ದೊರಕುತ್ತವೆ. ವಿಜಯನಗರದ ದೊರೆ ಬುಕ್ಕರಾಯನು ಶ್ರವಣಬೆಳ್ಗೊಳದಲ್ಲಿ ಬರೆಸಿದ ಶಾಸನದಲ್ಲಿ ಜೈನ, ಶ್ರೀ ವೈಷ್ಣವ ಧರ್ಮಗಳಲ್ಲಿ ಮೇಲು, ಕೀಳೆಂಬ ಭೇದವಿಲ್ಲವೆಂದೂ, ಅವರು ಪರಸ್ಪರ ಕಚ್ಚಾಡಬಾರದೆಂದು ಬರೆಸಿದ ಉಲ್ಲೇಖವಿದೆ. ತುಳುನಾಡಿನ ಜೈನ ಅರಸರು, ಹಿಂದೂದೇವರುಗಳಾದ ಜನಾರ್ದನ, ಮಹಾಲಿಂಗೇಶ್ವರಾದಿ ದೇವರುಗಳನ್ನು ತಮ್ಮ ರಾಜ್ಯದ ಅಧಿದೇವತೆಯೆಂದು ಸ್ವೀಕರಿಸಿ ಮುದ್ರೆಯುಂಗುರಗಳಲ್ಲಿ ಆ ದೇವರ ಹೆಸರನ್ನು ನಮೂದಿಸುತ್ತಿದ್ದರು. ಯಥಾರ್ಥಸ್ಥಿತಿ ಹೀಗಿದ್ದರೂ, ಇಂದಿಗೂ ದೇಶದಲ್ಲಿ ಜಾತಿ, ಮತ, ಮತ್ತು ದೇವರ ಹೆಸರಲ್ಲಿ ಸಾವಿರಾರು ಜನ ಅಮಾಯಕರ ಕೊಲೆ ಸುಲಿಗೆಗಳು ನಡೆದು ರಕ್ತದ ಕಾಲುವೆ ಹರಿಯುವಂತಾಗಿರುವುದು ಶೋಚನೀಯ. ಸಂಕುಚಿತ ಮನೋಭಾವನೆಯ, ಸ್ವಾರ್ಥಸಾಧಕರು ಧರ್ಮರಕ್ಷಣೆಯ ಮುಖವಾಡವನ್ನಿಟ್ಟು, ಪೊಳ್ಳು ನೆಪದಿಂದ, ಅಸಂಖ್ಯಾತ ಮುಗ್ಧ, ನಿರಪರಾಧಿ ಜನರ ಸರ್ವನಾಶಕ್ಕೆ ಮುಂದಾಗುವುದು ಖಂಡನೀಯವಾಗಿದೆ.

**ಶ್ರೀ ಪು. ಶ್ರೀನಿವಾಸ ಭಟ್ಟ**

ಭವ್ಯ ಪರಂಪರೆಯುಳ್ಳ ಸರ್ವಧರ್ಮ ಸಮನ್ವಯ, ದೇವನೊಬ್ಬನೇ – ಇತ್ಯಾದಿ ತಾತ್ತ್ವಿಕ ವಿಷಯಗಳನ್ನು ಪ್ರತಿಪಾದಿಸುವ ಕೆಲವು ಸಂಸ್ಕೃತ, ಕನ್ನಡ ಪದ್ಯಗಳನ್ನು ಉಲ್ಲೇಖಿಸುವುದು ಲೇಖನದ ಉದ್ದೇಶ. ೧೧ನೇ ಶತಮಾನದವನೆನ್ನಲಾದ ಹನುಮ ಕವಿಯ ಮಹಾನಾಟಕದ ಮಂಗಳಾಚರಣೆಗಳಲ್ಲಿರುವ ಈ ಪದ್ಯವು ಬಹಳ ರೋಚಕವಾಗಿದೆ.

ಯಂ ಶೈವಾ ಸ್ಸಮುಪಾಸತೇ ಶಿವ
ಇತಿ ಬ್ರಹ್ಮೇತಿ ವೇದಾನ್ತಿನೋ
ಬೌದ್ಧಾ ಬುದ್ಧ ಇತಿ ಪ್ರಮಾಣಪಟವಃ
ಕರ್ತೇತಿ ನೈಯಾಯಿಕಾಃ ।
ಅರ್ಹನ್ ಶ್ಚೇತಿಹ ಜೈನಶಾಸನಮಿತಿ
ಕರ್ಮೇತಿ ಮೀಮಾಂಸಕಾಃ
ಸೋಽಯಂ ವೋ ವಿದಧಾತು ವಾಂಛಿತ
ಫಲಂ ತ್ರೈಲೋಕ್ಯ ನಾಥೋ ಹರಿಃ ।

ಶೈವರಿಂದ ಶಿವನೆಂದೂ, ವೇದಾಂತಿಗಳಿಂದ ಬ್ರಹ್ಮನೆಂದೂ, ಬೌದ್ಧರಿಂದ ಬುದ್ಧನೆಂದೂ, ನೈಯಾಯಿಕರಿಂದ ಕರ್ತನೆಂದೂ, ಜೈನರಿಂದ ಅರ್ಹತನೆಂದೂ, ಮೀಮಾಂಸಕರಿಂದ ಕರ್ಮನೆಂದೂ ಕರೆಯಿಸಿಕೊಳುವ ತ್ರಿಲೋಕನಾಥನಾದ ಹರಿಯು ನಿಮ್ಮನ್ನು ಕಾಪಾಡಲಿ ಎಂದು ಭಾವಾರ್ಥಕೊಡುವ ಈ ಶ್ಲೋಕವು, ಕೊನೆಯ ಸಾಲಿನ ಕೊನೆಯ ಅಕ್ಷರಗಳಾಗಿ "ಶ್ರೀ ಕೇಶವಸ್ಸದಾ" ಎನ್ನುವ ಕಿಂಚಿತ್ ಬದಲಾವಣೆಯೊಂದಿಗೆ, ಹೊಯ್ಸಳರ ಶಾಸನ ರೂಪದಲ್ಲಿ ಬೇಲೂರು ಚೆನ್ನಕೇಶವ ದೇವಾಲಯದಲ್ಲಿದೆ. ಹೊಯಿಸಳ ಅರಸರ ಶಾಸನಗಳಲ್ಲಿ ಕಂಡುಬರುವ

ಶ್ರೀಮತ್ತ್ರೈಲೋಕ್ಯ ಪೂಜ್ಯಾಯ
ಸರ್ವ ಕರ್ಮ ಸುಸಾಕ್ಷಿಣೇ ।
ಫಲದಾಯ ನಮೋ ನಿತ್ಯಂ
ಕೇಶವಾಯ ಶಿವಾಯ ಚ ॥

ಇದರಲ್ಲಿ ಕೇಶವ ಮತ್ತು ಶಿವನನ್ನು ಅಭೇದವಾಗಿ ನೆನೆಯಲಾಗಿದೆ. ನಾಥಪಂಥದ ಸಿದ್ಧಸಿದ್ಧಾಂತ ಪದ್ಧತಿಯಲ್ಲಿರುವ ಹಿಂದು ಶ್ಲೋಕವು ಪ್ರಪಂಚದ ಸಕಲಶಕ್ತಿಗಳಿಗೂ ಮಿಗಿಲಾದ, ಸ್ವಯಂಜ್ಯೋತಿಸ್ವರೂಪವಾದ ಸಚ್ಚಿದಾನಂದ ಮೂರ್ತಿಯೊಂದಿದೆ. ಅದೇ ನಿಜವಾದ ಸತ್ಯ ಎಂದು ಸಾರುತ್ತದೆ. ಅದು ಹೀಗಿದೆ–

ನ ಬ್ರಹ್ಮಾ ವಿಷ್ಣು ರುದ್ರಾ ನ ಸುರಪತಿಃ
ಸುರಾ ನೈವ ಪೃಥ್ವೀ ನ ಚಾಪೋ
ನೈ ವಾಗ್ನಿರ್ವಾಪಿ ವಾಯುರ್ನ ಗಗನ
ತಲಂ ನೋ ದಿಶೋ ನೈವ ಕಾಲಃ ।
ನೋ ವೇದೋ ನೈವ ಯಜ್ಞಾ ನ ಜ
ರವಿಶಶಿನೌ ನೋ ವಿಧಿರ್ನೈವಕಲ್ಪಃ
ಸ್ವಜ್ಯೋತಿಃ ಸತ್ಯಮೇಕಂ ಜಯತಿ ತವ
ಪದಂ ಸಚ್ಚಿದಾನಂದಮೂರ್ತೇ

ಹರಿಹರಬ್ರಹ್ಮರನ್ನು ಒಟ್ಟಾಗಿ ನೆನೆದಿರುವ ಒಂದು ಕನ್ನಡ ಪದ್ಯವಿದೆ.

ಶ್ರೀ ವಾಣೀ ಗಿರಿಜಾಧಿಪರ್ ಗರುಡ
ಹಂಸೋಕ್ಷಾಸನರ್ ವಾರ್ಧಿರಾ
ಜೀವಾದ್ರೀಂದ್ರ ನಿವಾಸಿಗಳ್ ಮಧುಪ-
ರಕ್ತಾಂಭೋರುಹೇಂದು ಪ್ರಭರ್
ದೇವರ್ ಸತ್ತ್ವರಜಸ್ತಮೋಗುಣಯುತರ್
ದ್ವ್ಯಷ್ಟತ್ರಿನೇತ್ರೋತ್ಪಲರ್
ಗೋವಿಂದಾಬ್ಜ ಶಂಕರ ತ್ರಿಪುರುಷರ್
ಪಾಲಿಕೆ ನಮ್ಮಂ ಚಿರಂ ॥

ಎಂದಿರುವುದು ಹೃದಯಂಗಮವಾಗಿದೆ. ಕನ್ನಡದ ಪ್ರಖ್ಯಾತ ಕವಿ ರತ್ನಾಕರ ವರ್ಣಿಯು ತನ್ನ ಕಾವ್ಯಗಳಲ್ಲಿ ದೇವನೊಬ್ಬನೆಂದು ಸೂಚಿಸಿರುವ ಪದ್ಯಗಳನ್ನು ಬರೆದು ಪ್ರಚುರಪಡಿಸಿರುವನು. ಉನ್ನತ ಕೃತಿಯಾದ ಭರತೇಶವೈಭವದಲ್ಲಿ

ಜಿನನೆಂದು ಶಿವನೆಂದು
ಪೆಸರೀಶಗುಂಟದು ।
ಜಿನರಾತ್ರಿ ಶಿವರಾತ್ರಿಯೆಂದು ।
ಮನುಜರು ಮನ್ನಿಸುತಿರ್ಪರೆಂಬಲ್ಲಿಗೆ ।
ಜಿನಮುಕ್ತಿಗಮನಸಂಧಿ ॥
(ಭರತೇಶವೈಭವ-ಜಿನಮುಕ್ತಿಗಮನಸಂಧಿ
-97)

ಎಂದು ಉಪದೇಶಿಸಿದರೆ, ತನ್ನ ಇನ್ನೊಂದು ಕೃತಿ ರತ್ನಾಕರ ಶತಕದಲ್ಲಿ-

ತ್ರಿಜಗತ್ಸ್ವಾಮಿ ಜಿನೇಂದ್ರ ಸಿದ್ಧ ಶಿವ
ಲೋಕಾರಾಧ್ಯ ಸರ್ವಜ್ಞ ಶಂಭು ಜಗನ್ನಾಥ ಜಗತ್ಪಿತಾಮಹ ಹರ
ಶ್ರೀಕಾಂತ ವಾಣೀಶ ವಿ-
ಷ್ಣು ಜಿತಾನಂಗ ಜಿನೇಶ ಪಶ್ಚಿಮ
ಸಮುದ್ರಾಧೀಶ್ವರಾ ಬೇಗದಿಂ
ನಿಜಮಂ ತೋರು ದಯಾಳುವೇ
ತಳುವಿದೇಂ? ರತ್ನಾಕರಾಧೀಶ್ವರಾ ॥128॥

ನೀನು ತ್ರಿಲೋಕದೊಡೆಯನು. ಮಂಗಳ ಪ್ರದನಾದುದರಿಂದ ಶಿವನು, ಎಲ್ಲವನ್ನೂ ತಿಳಿದವನಾದುದರಿಂದ ಸರ್ವಜ್ಞನು, ಶುಭ ಪ್ರದನಾದುದರಿಂದ ಶಂಭುವು, ಪ್ರಪಂಚದ ಪ್ರಭುವಾದುದರಿಂದ ಜಗನ್ನಾಥನು, ಜೀವ ಕೋಟಿಗಳಿಗೆ ಹಿರಿಯನಾದುದರಿಂದ ಜಗತ್ಪಿತಾಮಹನು, ಕರ್ಮವನ್ನು ನಾಶ ಮಾಡುವ ಹರನು ನೀನು, ಸಂಪತ್ತಿನ ಒಡೆಯನಾದುದರಿಂಚ ಶ್ರೀಕಾಂತನು, ಜ್ಞಾನಾಧಿಪತಿಯಾದುದರಿಂದ ವಾಣೀಶನು, ಸರ್ವರಕ್ಷಕನಾದುದರಿಂದ ವಿಷ್ಣುವು, ಕಾಮನನ್ನು ಗೆದ್ದಿರುವುದರಿಂದ ಜಿತಾನಂಗನು, ಪಶ್ಚಿಮ ಸಮುದ್ರಾಧಿಪತಿಯಾದುದರಿಂದ ಆದಿತೀರ್ಥಂಕರನು, ಎನ್ನುವ ಅರ್ಥವನ್ನು ಈ ಪದ್ಯವು ಹೊರಹೊಮ್ಮಿಸುತ್ತದೆ.

ಅವರವರ ದರುಶನಕೆ
ಅವರವರ ವೇಷದಲಿ
ಅವರವರಿಗೆಲ್ಲ ಗುರು ನೀನೊಬ್ಬನೆ ॥
ಅವರವರ ಭಾವಕ್ಕೆ ಅವರವರ ಪೂಜೆಗೆ ।
ಅವರವರಿಗೆಲ್ಲ ಶಿವ ನೀನೊಬ್ಬನೆ ॥
ಹೋರಾಟವಿಕ್ಕಿಸಲು ಬೇರಾದೆಯಲ್ಲದೆ ।
ಬೇರುಂಟೆ ಜಗದೊಳಗೆ ಎಲೆ ದೇವನೆ ॥

ಎಂದು ಹೇಳಿರುವ ಮುಪ್ಪಿನಷಡಕ್ಷರ ಕವಿಯ ಮಾತು ಗಮನೀಯವಾಗಿದೆ. ಕನ್ನಡದ ಇನ್ನೊಬ್ಬ ಕವಿ ಸೋಮರಾಜನೆಂಬುವನು ತನ್ನ ಉದ್ಭಟಕಾವ್ಯದ ಪ್ರಥಮಾಶ್ವಾಸದಲ್ಲಿ

ಶಿವನೆಂದುತ್ತಮ ಶೈವರಂಬುರುಹ
ನೇತ್ರಂಗೆತ್ತು ತಾಂ ವೈಷ್ಣವರ್
ಹವಿರನ್ನಪ್ರಿಯನೆಂದು ಭೂಮಿ
ದಿವಿಜಜ್ರೈರ್ನರ್ಜನಂಗೆತ್ತು ತ ।

(34ನೇ ಪುಟ ನೋಡಿ)

# ಶ್ರೀಮದ್ಭಗವದ್ಗೀತೆ

## ೧೭ ನೆಯ ಅಧ್ಯಾಯ

## ಶ್ರದ್ಧೆಯ ಮೂರು ಬಗೆ

ಅರ್ಜುನ ಉವಾಚ–

ಯೇ ಶಾಸ್ತ್ರವಿಧಿಮುತ್ಸೃಜ್ಯ
ಯಜಂತೇ ಶ್ರದ್ಧಯಾನ್ವಿತಾಃ ।
ತೇಷಾಂ ನಿಷ್ಠಾ ತು ಕಾ ಕೃಷ್ಣ
ಸತ್ತ್ವಮಾಹೋ ರಜಸ್ತಮಃ ॥ 1

ಅರ್ಜುನ: ಕೃಷ್ಣ, ಯಾರು ಶಾಸ್ತ್ರದ ನಿಯಮಗಳನ್ನು ತಿಳಿಯದೆ ಶ್ರದ್ಧೆಯಿಂದ ಪೂಜಿಸುತ್ತಾರೋ ಅವರ ನಡವಳಿಕೆ ಯಾವುದು? ಸಾತ್ತ್ವಿಕವೋ ರಾಜಸವೋ ಅಥವಾ ತಾಮಸವೋ?

ಶ್ರೀಭಗವಾನುವಾಚ–

ತ್ರಿವಿಧಾ ಭವತಿ ಶ್ರದ್ಧಾ
ದೇಹಿನಾಂ ಸಾ ಸ್ವಭಾವಜಾ ।
ಸಾತ್ತ್ವಿಕೀ ರಾಜಸೀ ಚೈವ
ತಾಮಸೀ ಚೇತಿ ತಾಂ ಶೃಣು ॥ 2

ಶ್ರೀಕೃಷ್ಣ: ಜೀವರ ಹುಟ್ಟುಗುಣವಾದ ಆ ಶ್ರದ್ಧೆಯು ಸಾತ್ತ್ವಿಕವೆಂದೂ ರಾಜಸವೆಂದೂ ತಾಮಸವೆಂದೂ ಮೂರು ಬಗೆಯಾಗುತ್ತದೆ. ಅದರ ವಿಷಯವನ್ನು ಕೇಳು.

ಸತ್ತ್ವಾನುರೂಪಾ ಸರ್ವಸ್ಯ
ಶ್ರದ್ಧಾ ಭವತಿ ಭಾರತ ।
ಶ್ರದ್ಧಾಮಯೋಽಯಂ ಪುರುಷಃ
ಯೋ ಯಚ್ಛ್ರದ್ಧಃ ಸ ಏವ ಸಃ ॥ 3

ಅರ್ಜುನ, ಎಲ್ಲರ ಶ್ರದ್ಧೆಯೂ ಅವರ ಮನಸ್ಸಿನ ಸಂಸ್ಕಾರಕ್ಕೆ ಅನುಗುಣವಾಗಿ ಆಗುತ್ತದೆ. ಈ ಮನುಷ್ಯನು ಶ್ರದ್ಧೆಯಂತೆ ಆಗುತ್ತಾನೆ. ಯಾವನಿಗೆ ಯಾವ ಬಗೆಯ ಶ್ರದ್ಧೆಯೋ ಅವನು ಅದೇ ಆಗುತ್ತಾನೆ.

ಯಜಂತೇ ಸಾತ್ತ್ವಿಕಾ ದೇವಾನ್
ಯಕ್ಷರಕ್ಷಾಂಸಿ ರಾಜಸಾಃ ।
ಭೂತಾನ್ ಪ್ರೇತಗಣಾಂಶ್ಚಾನ್ಯೇ
ಯಜಂತೇ ತಾಮಸಾ ಜನಾಃ ॥ 4

ಸತ್ವಗುಣದವರು ದೇವತೆಗಳನ್ನೂ ರಜೋಗುಣದವರು ಯಕ್ಷರನ್ನೂ, ರಾಕ್ಷಸರನ್ನೂ ಪೂಜಿಸುತ್ತಾರೆ. ಉಳಿದ ತಮೋಗುಣದ ಜನರು ಪಿಶಾಚಿಗಳನ್ನೂ ಭೂತಗಳನ್ನೂ ಪೂಜಿಸುತ್ತಾರೆ.

ಅಶಾಸ್ತ್ರವಿಹಿತಂ ಘೋರಂ
ತಪ್ಯಂತೇ ಯೇ ತಪೋ ಜನಾಃ ।
ದಂಭಾಹಂಕಾರಸಂಯುಕ್ತಾಃ
ಕಾಮರಾಗಬಲಾನ್ವಿತಾಃ ॥ 5

ಕರ್ಷಯಂತಃ ಶರೀರಸ್ಥಂ
ಭೂತಗ್ರಾಮಮಚೇತಸಃ ।
ಮಾಂ ಚೈವಾಂತಃ ಶರೀರಸ್ಥಂ
ತಾನ್ ವಿದ್ಧ್ಯಾಸುರನಿಶ್ಚಯಾನ್ ॥ 6

ಯಾವ ಜನರು ತಾವು ದೊಡ್ಡವರೆಂದುಕೊಂಡು ಬಯಕೆಗಳ ಮತ್ತು ವಿಷಯಗಳ ಮೇಲಿನ ಪ್ರೀತಿಯ ಆವೇಶದಿಂದ ಕೂಡಿ ಶಾಸ್ತ್ರದಲ್ಲಿ ಹೇಳಿಲ್ಲದಂಥ ಮತ್ತು ಪ್ರಾಣಿಗಳಿಗೆ ಪೀಡೆಯನ್ನು ಮಾಡುವಂಥ ತಪಸ್ಸನ್ನು ಮಾಡುತ್ತಾರೋ, ದೇಹದಲ್ಲಿರುವ ಇಂದ್ರಿಯಗಳನ್ನೆಲ್ಲವನ್ನೂ ಮತ್ತು ಶರೀರದೊಳಗಿರುವ ನನ್ನನ್ನೂ ಕಡೆಗಣಿಸುವ ಆ ಅವಿವೇಕಿಗಳನ್ನು ಅಸುರ ಸ್ವಭಾವದವರೆಂದು ತಿಳಿ.

ಆಹಾರಸ್ತ್ವಪಿ ಸರ್ವಸ್ಯ
ತ್ರಿವಿಧೋ ಭವತಿ ಪ್ರಿಯಃ ।



ಯಜ್ಞಸ್ತಪಸ್ತಥಾ ದಾನಂ
ತೇಷಾಂ ಭೇದಮಿಮಂ ಶೃಣು ॥ 7

ಎಲ್ಲರ ಆಹಾರದಲ್ಲಿಯೂ ಹಾಗೆಯೇ ಯಜ್ಞ, ತಪಸ್ಸು ದಾನ–ಇವುಗಳಲ್ಲಿಯೂ ಮೂರು ಬಗೆಯ ಅಭಿರುಚಿ ಇರುತ್ತವೆ. ಅವುಗಳ ಈ ಭೇದಗಳನ್ನು ಕೇಳು.

ಆಯುಸ್ಸತ್ತ್ವಬಲಾರೋಗ್ಯ
ಸುಖಪ್ರೀತಿವಿವರ್ಧನಾಃ ।
ರಸ್ಯಾಃ ಸ್ನಿಗ್ಧಾಃ ಸ್ಥಿರಾ ಹೃದ್ಯಾಃ
ಆಹಾರಾಃ ಸಾತ್ತ್ವಿಕಪ್ರಿಯಾಃ ॥ 8

ಆಯುಸ್ಸನ್ನೂ ಉತ್ಸಾಹವನ್ನೂ ಶಕ್ತಿಯನ್ನೂ ಆರೋಗ್ಯವನ್ನೂ ಸುಖವನ್ನೂ ಪ್ರೀತಿಯನ್ನೂ ಹೆಚ್ಚಿಸುವ, ರಸದಿಂದಲೂ ಜಿಡ್ಡಿನಿಂದಲೂ ಕೂಡಿ ಕೆಲವುಕಾಲ ಶರೀರದಲ್ಲಿ ಉಳಿಯುವ ಮನೋಹರವಾದ ಆಹಾರಗಳು ಸಾತ್ತ್ವಿಕರಿಗೆ ಬೇಕೆನಿಸುವುವು.

ಕಟ್ವಮ್ಲಲವಣಾತ್ಯುಷ್ಣ
ತೀಕ್ಷ್ಣರೂಕ್ಷವಿದಾಹಿನಃ ।
ಆಹಾರಾ ರಾಜಸಸ್ಯೇಷ್ಟಾಃ
ದುಃಖಶೋಕಾಮಯಪ್ರದಾಃ ॥ 9

ಬಹಳ ಕಾರ, ಹುಳಿ, ಉಪ್ಪು, ಬಿಸಿ, ತೀಕ್ಷ್ಣ, ಒಣಗಿರುವಿಕೆ, ಸೀದವುಗಳು, ಅಥವಾ ಹುರಿಯದವುಗಳು, ದುಃಖ, ವೇದನೆ, ರೋಗಗಳನ್ನು ಉಂಟುಮಾಡತಕ್ಕಂಥ ಆಹಾರಗಳು – ಇವು ರಾಜಸರಿಗೆ ಬೇಕೆನಿಸುವವು.

ಯಾತಯಾಮಂ ಗತರಸಂ
ಪೂತಿಪರ್ಯುಷಿತಂ ಚ ಯತ್ ।
ಉಚ್ಛಿಷ್ಟಮಪಿ ಚಾಮೇಧ್ಯಂ
ಭೋಜನಂ ತಾಮಸಪ್ರಿಯಮ್ ॥ 10

ಯಾವುದು ಬೆಂದು ಒಂದು ಜಾವದ ಮೇಲಾಗಿ ಇರುವುದೋ, ಒಣಲಾಕಗಿರುವುದೋ, ದುರ್ಗಂಧದಿಂದ ಕೂಡಿರುವುದೋ, ಬೆಂದ ಮೇಲೆ ರಾತ್ರಿಯನ್ನು ಕಳೆದಿರುವುದೋ, ಉಂಡು ಮಿಕ್ಕದ್ದೋ, ದೇವರಿಗೊಪ್ಪಿಸುವುದಕ್ಕೆ ಯೋಗ್ಯವಲ್ಲದ್ದೋ ಇಂಥ ಊಟವು ತಾಮಸರಿಗೆ ಬೇಕೆನಿಸುವುದು.

ಅಫಲಾಕಾಂಕ್ಷಿಭಿರ್ಯಜ್ಞೋ
ವಿಧಿದೃಷ್ಟೋ ಯ ಇಜ್ಯತೇ ।
ಯಷ್ಟವ್ಯಮೇವೇತಿ ಮನಃ
ಸಮಾಧಾಯ ಸ ಸಾತ್ತ್ವಿಕಃ ॥ 11

ಫಲವನ್ನು ಬಯಸದೆ ಶಾಸ್ತ್ರದಲ್ಲಿ ಹೇಳಿದೆ ಎನ್ನುವ ಕರ್ತವ್ಯ ಬುದ್ಧಿಯಿಂದ ದೃಢ ಮನಸ್ಸಿನಿಂದ ಮಾಡುವ ಯಜ್ಞವು ಸಾತ್ತ್ವಿಕ ಯಜ್ಞ

ಅಭಿಸಂಧಾಯ ತು ಫಲಂ
ದಂಭಾರ್ಥಮಪಿ ಚೈವ ಯತ್ ।
ಇಜ್ಯತೇ ಭರತಶ್ರೇಷ್ಠ ತಂ
ಯಜ್ಞಂ ವಿದ್ಧಿ ರಾಜಸಮ್ ॥ 12

ಅರ್ಜುನ, ಫಲವನ್ನು ಲಕ್ಷ್ಯದಲ್ಲಿಟ್ಟುಕೊಂಡು ಜನರ ತೋರಿಕೆಗಾಗಿ ಯಾವ ಯಜ್ಞವನ್ನು ನಡೆಸಲಾಗುತ್ತದೋ ಅದನ್ನು ರಾಜಸವೆಂದು ತಿಳಿ.

ವಿಧಿಹೀನಮಸೃಷ್ಟಾನ್ನಂ
ಮಂತ್ರಹೀನ ಮದಕ್ಷಿಣಮ್ ।
ಶ್ರದ್ಧಾ ವಿರಹಿತಂ ಯಜ್ಞಂ
ತಾಮಸಂ ಪರಿಚಕ್ಷತೇ ॥ 13

ನಿಯಮಗಳಿಲ್ಲದೆ ಅನ್ನದಾನವಿಲ್ಲದೆ ಮಂತ್ರವಿಲ್ಲದೆ ದಕ್ಷಿಣೆ ಇಲ್ಲದೆ ಶ್ರದ್ಧೆ ಇಲ್ಲದೆ ಮಾಡುವ ಯಜ್ಞವನ್ನು ತಾಮಸವೆನ್ನುತ್ತಾರೆ.

ದೇವದ್ವಿಜಗುರುಪ್ರಾಜ್ಞ
ಪೂಜನಂ ಶೌಚಮಾರ್ಜವಮ್ ।
ಬ್ರಹ್ಮಚರ್ಯ ಮಹಿಂಸಾ ಚ
ಶಾರೀರಂ ತಪ ಉಚ್ಯತೇ ॥ 14

ದೇವತೆಗಳನ್ನೂ, ಬ್ರಾಹ್ಮಣರನ್ನೂ, ಗುರುಗಳನ್ನೂ, ಹೆಚ್ಚಿನ ತಿಳುವಳಿಕೆಯುವರನ್ನೂ ಪೂಜಿಸುವುದು, ನೈರ್ಮಲ್ಯ, ನೇರನಡೆ, ಕಾಮುಕತೆಯಿಲ್ಲದಿರುವುದು, ಇತರರನ್ನು ಪೀಡಿಸದೆ ಇರುವುದು – ಇವೆಲ್ಲ ಶರೀರದಿಂದ ಮಾಡುವ ತಪಸ್ಸೆನಿಸುವುವು.

ಅನುದ್ವೇಗಕರಂ ವಾಕ್ಯಂ
ಸತ್ಯಂ ಪ್ರಿಯಹಿತಂ ಚ ಯತ್ ।
ಸ್ವಾಧ್ಯಾಯಾಭ್ಯಸನಂ ಚೈವ
ವಾಙ್ಮಯಂ ತಪ ಉಚ್ಯತೇ ॥ 15

ಯಾವುದು ನಿಜವಾದದ್ದೋ, ಈಗ ಕೇಳುವುದಕ್ಕೆ ಪ್ರಿಯವೂ ಮುಂದಕ್ಕೆ ಹಿತವೂ ಆದದ್ದೋ, ಯಾರಿಗೂ ತಳಮಳವನ್ನುಂಟುಮಾಡುವುದಿಲ್ಲವೋ ಅಂಥ ಮಾತೂ, ವೇದಾಧ್ಯಯನವೂ ಮಾತಿನಿಂದ ಮಾಡುವ ತಪಸ್ಸೆನಿಸುವುವು.

ಮನಃಪ್ರಸಾದಃ ಸೌಮ್ಯತ್ವಂ
ಮೌನ ಮಾತ್ಮವಿನಿಗ್ರಹಃ ।
ಭಾವಸಂಶುದ್ಧಿ ರಿತ್ಯೇತತ್
ತಪೋ ಮಾನಸ ಮುಚ್ಯತೇ ॥ 16

ಮನಸ್ಸು ತಿಳಿಯಾಗಿರುವುದು, ಸೌಮ್ಯವಾದ ನಡೆ, ನಿರಂತರ ಮನನ, ಮನಸ್ಸನ್ನು ಬಿಗಿಹಿಡಿಯುವುದು, ವಂಚನೆ ಇಲ್ಲದಿರುವುದು – ಇವು ಮನಸ್ಸಿನ ತಪಸ್ಸೆನಿಸುವುವು.

ಶ್ರದ್ಧಯಾ ಪರಯಾ ತಪ್ತಂ
ತಪಸ್ತತ್ತ್ರಿವಿಧಂ ನರೈಃ ।
ಅಫಲಾಕಾಂಕ್ಷಿಭಿರ್ಯುಕ್ತೈಃ
ಸಾತ್ತ್ವಿಕಂ ಪರಿಚಕ್ಷತೇ ॥ 17

ಫಲವನ್ನು ಬಯಸದೆ ಸಮಾಧಾನವಾದ ಮನಸ್ಸಿನಿಂದ ಮನುಷ್ಯನು ಹೆಚ್ಚಿನ ವಿಶ್ವಾಸದಿಂದ ಮಾಡಿದ ಈ ಮೂರು ಬಗೆಯ ತಪಸ್ಸುಗಳು ಸಾತ್ತ್ವಿಕವೆನಿಸುವುವು.

ಸತ್ಕಾರಮಾನಪೂಜಾರ್ಥಂ
ತಪೋ ದಂಭೇನ ಚೈವ ಯತ್ ।
ಕ್ರಿಯತೇ ತದಿಹ ಪ್ರೋಕ್ತಂ
ರಾಜಸಂ ಚಲಮಧ್ರುವಮ್ ॥ 18

ದೊಡ್ಡವನೆನಿಸಿಕೊಳ್ಳಬೇಕೆಂದೂ, ಮಾನವನ್ನೂ ಪೂಜೆಯನ್ನೂ ಪಡೆಯಬೇಕೆಂದೂ, ಇತರರ ತೋರಿಕೆಗಾಗಿ ಮಾಡುವ ತಪಸ್ಸು ಲೋಕದಲ್ಲಿ ಹೊಯ್ದಾಡುತ್ತಿರುವಂಥ ಮತ್ತು ಅಲ್ಪಕಾಲವಿರುವ ಫಲವನ್ನು ಕೊಡುವಂಥ ರಾಜಸವೆನಿಸುವುದು.

(33 ನೇ ಪುಟ ನೋಡಿ)

## ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ,
### ತಿರುಚಾನೂರು

ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ. ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ.

### ಆಲಯ ಕಾರ್ಯಕ್ರಮ.

| | ಶುಕ್ರವಾರಗಳಲ್ಲಿ | ಇತರ ದಿನಗಳಲ್ಲಿ |
|---|---|---|
| ಸುಪ್ರಭಾತ | ಬೆಳಗ್ಗೆ 4–00 ರಿಂದ 4–30 | ಬೆಳಗ್ಗೆ 5–00 ರಿಂದ 5–30 |
| ಸಹಸ್ರನಾಮಾರ್ಚನೆ | ,, 4–30 ರಿಂದ 5–00 | ,, 5–30 ರಿಂದ 6–00 |
| (ರೂ 6–50 ಶುಲ್ಕದಿಂದ 4 ಮಂದಿಗೆ ಅನುಮತಿ) | | |
| ನಿತ್ಯ ಅರ್ಚನೆ | ಬೆಳಗ್ಗೆ 5–00 ರಿಂದ 5–15 | ಬೆಳಗ್ಗೆ 6–00 ರಿಂದ 6–15 |
| (ರೂ 150/- ವಾರ್ಷಿಕ ಶುಲ್ಕ ನೀಡಿದ ಗೃಹಸ್ಥರನ್ನು ಅನುಮತಿಸಲಾಗುವುದು) | | |
| ಶುದ್ಧಿ, 1ನೇ ಗಂಟೆ | ಬೆಳಗ್ಗೆ 5–15 ರಿಂದ 5–45 | ಬೆಳಗ್ಗೆ 6–15 ರಿಂದ 6–15 |
| ಸರ್ವದರ್ಶನ | ,, 5–45 ರಿಂದ 7–00 | ,, 6–15 ರಿಂದ 1–00 |
| ಸಳ್ಳಿಂಪು | ,, 7–00 ರಿಂದ 7–30 | |
| ಅಭಿಷೇಕ | ,, 9–00 ರಿಂದ 10–00 | |
| ( ರೂ 100/- ಶುಲ್ಕದಿಂದ ಇಬ್ಬರಿಗೆ ಅನುಮತಿ ) | | |
| ಅಲಂಕಾರ 2ನೇ ಗಂಟೆ | 10–00 ರಿಂದ 11–00 | ಮಧ್ಯಾಹ್ನ 1–00 ರಿಂದ 1–30 |
| ಸರ್ವದರ್ಶನ | 11–00 ರಿಂದ ರಾತ್ರಿ 8–00 | 1–30 ರಿಂದ 7–00 |
| ಊಂಜಲ್ ಸೇವೆ (ಮುಕುರ ಮಂಟಪದಲ್ಲಿ) | ರಾತ್ರಿ 7–00 ರಿಂದ 8–00 (ಶುಲ್ಕ ರೂ 150/- ಗೃಹಸ್ಥರಿಗೆ 5 ಗ್ರಾಂಗಳ ಬೆಳ್ಳಿಯ ಪದಕ ಬಹೂಕರಣವಿದೆ) | — |
| ರಾತ್ರಿ ಗಂಟೆ | ರಾತ್ರಿ [illegible]–00 ರಿಂದ 8–30 | ರಾತ್ರಿ 7–00 ರಿಂದ 7–30 |
| ಸರ್ವದರ್ಶನ | — | ,, 7–30 ರಿಂದ 8–30 |
| ಏಕಾಂತಸೇವೆ | ,, 8–30 ರಿಂದ 9–00 | ,, 8–30 ರಿಂದ 9–00 |

**ಪೇಷ್ಕಾರ್.**

**ಹರಿದಾಸವಾಣಿ**

# ವಿಜಯದಾಸರು
## ಒಂದು ಪರಿಚಯ

ದಾಸ ಸಾಹಿತ್ಯ ಸೃಷ್ಟಿಯಾದ ಉದ್ದೇಶ ಪಂಡಿತರನ್ನು ರಾಜಮಹಾರಾಜರನ್ನು ಮೆಚ್ಚಿಸಿ ತಾವು ಕೀರ್ತಿಯನ್ನಾಗಲಿ ಧನವನ್ನಾಗಲೀ ಗಳಿಸಬೇಕೆಂಬುದಲ್ಲ. ಮುಖ್ಯವಾಗಿ ಜನಮನದಲ್ಲಿ ಭಕ್ತಿಭಾವವನ್ನು ಬೆಳಸಿ ಮುಕ್ತಿಮಾರ್ಗವನ್ನು ಸರ್ವರೂ ಕಂಡುಕೊಳ್ಳಲಿ ಎಂಬ ಉದ್ದೇಶದಿಂದ ರಚಿತವಾದದ್ದು. ಸಮಾಜ ಜೀವನದಲ್ಲಿದ್ದ ಲೋಪದೋಷಗಳನ್ನು ಅರಿತು ಅವುಗಳ ಪರಿಹಾರಕ್ಕೆ ಮಾರ್ಗದರ್ಶನ ನೀಡಿದರು ಹರಿದಾಸರು. ಮಾನವ ಮನಸ್ಸನ್ನು ಭ್ರಾಂತಿಗೀಡು ಮಾಡಿ ಅವರನ್ನು ಅಡ್ಡದಾರಿಗೆ ಎಳೆಯುತ್ತಿದ್ದ ಅಸತ್ಯಗಳನ್ನು ಆಮಿಷಗಳನ್ನು ಅವರಿಗೆ ತೋರಿಸಿಕೊಟ್ಟು ಜನತೆಯ ಅಜ್ಞಾನವನ್ನು ಸುಟ್ಟು, ಜ್ಞಾನದ ಜ್ಯೋತಿಯನ್ನು ಹೊತ್ತಿಸಿತು ದಾಸ ಸಾಹಿತ್ಯ. ಸಮಾಜದೊಂದಿಗೆ ನಿಕಟ ಸಂಪರ್ಕ ಹೊಂದಿದ್ದು ಜನಸಾಮಾನ್ಯರಿಗಾಗಿ ರಚಿತವಾದ ದಾಸವಾಣಿ ಇಂದಿಗೂ ಜನವಾಣಿಯಾಗಿದೆ. ಅಸಂಖ್ಯಾತವಾಗಿ ರಚಿತವಾಗಿರುವ ದಾಸರ ಸವಿಯಾದ ಹಾಡುಗಳನ್ನು ಕೇಳದವರೇ ಅಪರೂಪವೆನ್ನಬಹುದು. ಭಕ್ತಿ, ಜ್ಞಾನ ಮತ್ತು ವೈರಾಗ್ಯಪರವಾದ ವಿಚಾರಗಳನ್ನು ಸರಳವಾಗಿ ತಿಳಿಸುವ ದಾಸ ಸಾಹಿತ್ಯ ಜನತೆಯನ್ನು ಸನ್ಮಾರ್ಗಕ್ಕೆ ಕರೆದೊಯ್ಯುವ ಹಿಂದು ಸಾಧಕವಾಗಿದೆ.

ಕ್ರಿ. ಶ. ಹದಿನೇಳನೆಯ ಶತಮಾನದಲ್ಲಿ ಉತ್ತರ ಕರ್ನಾಟಕದ ರಾಯಚೂರು ಜಿಲ್ಲೆಯ 'ಮಾನವಿ' ಎಂಬ ತಾಲ್ಲೂಕಿನ 'ಚೀಕನ ಪರಿಪಿ' ಎಂಬ ಗ್ರಾಮದಲ್ಲಿ ಶ್ರೀನಿವಾಸಪ್ಪ – ಕೂಸಮ್ಮ ಎಂಬ ಬ್ರಾಹ್ಮಣ ದಂಪತಿಗಳಿಗೆ ಮಗನಾಗಿ ಹುಟ್ಟಿದರು, ದಾಸಪ್ಪ ಎಂಬ ಪೂರ್ವ ನಾಮದ ವಿಜಯದಾಸರು. ತಂದೆ ತಾಯಿಗಳು ಕಡು ಬಡವರು. ಬಡತನ ಎಷ್ಟು ಕ್ರೂರವಾಗಿತ್ತೆಂದರೆ "ಸಂಜೆತನಕವಿದ್ದು ಸಣ್ಣ ಸೌಟಿನ ತುಂಬ ಗಂಜಿ ಕಾಣವೆ ಬಳಲಿದನೊ" ಎಂದು ದಾಸರೇ ಹೇಳಿಕೊಂಡಿದ್ದಾರೆ. ದಾಸಪ್ಪ ಬೆಳೆದ ಹಾಗೆ ಅವರಿಗೆ ವಿವಾಹವೂ ಆಯಿತು. ವಿವಾಹ ಯಾವ ಸುಖವನ್ನೂ ತರಲಿಲ್ಲ. ಬಡತನದ ಬೇಗೆಯನ್ನು ಮತ್ತಷ್ಟು ಹೆಚ್ಚಿಸಿತು. ಕೊನೆಗೆ ದಾಸಪ್ಪ ದಾರಿ ಕಾಣದೆ ತಂದೆ ತಾಯಿ ಹೆಂಡತಿಯನ್ನು ತೊರೆದು ತಮ್ಮ ಹದಿನಾರನೆಯ ವಯಸ್ಸಿನಲ್ಲಿ ಮನೆ ಬಿಟ್ಟು ಹೊರಟು ಹೋದರು. ಅವರು ತಮ್ಮ ಇಪ್ಪತ್ತನೆಯ ವಯಸ್ಸಿನಲ್ಲಿ ಮನೆಗೆ ಹಿಂತಿರುಗಿದರೂ ಪುನಃ ಕಾಶಿಗೆ ಹೋದರು. ಅಲ್ಲಿ ಒಂದು ದಿನ ದಾಸಪ್ಪ ಒಂದು ದಿವ್ಯ ಕನಸನ್ನು ಕಂಡರು. ಪುರಂದರದಾಸರು ಕನಸಿನಲ್ಲಿ ಕಾಣಿಸಿಕೊಂಡು ವೇದವ್ಯಾಸರ ದರ್ಶನ ಮಾಡಿಸಿದರು. ವಿಜಯವಿಠಲ ಎಂಬ ಅಂಕಿತವನ್ನು ನೀಡಿ ಆಶೀರ್ವದಿಸಿದರು. ಅಂದಿನಿಂದ ದಾಸಪ್ಪನ ಮನದ ಆಂದೋಳನ, ವ್ಯಾಕುಲ, ಅಶಾಂತಿ–ಎಲ್ಲವೂ ಪರಿಹಾರವಾಗಿ ಮನಸ್ಸು ತಿಳಿಯಾದ ನೀರಿನಂತಾಯಿತು. ಪುರಂದರ ದಾಸರನ್ನು ಗುರುವರ್ಯರಾಗಿ ಸ್ವೀಕರಿಸಿ

ದಾಸ ಪುರಂದರನ ಪಾದವನು
ಪೊಂದಿದೆನೊ
ಏ ಸುಜನ್ಮದ ಪುಣ್ಯರಾಶಿ ಫಲಿಸಿತೊ
ಎನಗೆ

ಎಂದು ಹಾಡಿದರು. ಪುರಂದರದಾಸರ ಕೃಪೆ ದೊರೆತ ಮೇಲೆ ಈಸಬೇಕು ಇದ್ದು ಜೈಸಬೇಕು ಎಂಬ ಗುರುವಾಣಿಯಂತೆ ತಮ್ಮ ಊರಿಗೆ ಹೋಗಿ ಸಂಸಾರವನ್ನು ಅಲಕ್ಷಿಸದೆ ತಮ್ಮ ಹೊಣೆಗಾರಿಕೆಯನ್ನು ನಿರ್ವಹಿಸಿದರು. ಬಡತನವಿದ್ದರೂ ಹರಿನಾಮಸ್ಮರಣೆ ಬಿಡದೆ ಭಕ್ತಿಪರವಶರಾಗಿ ಹರಿಸಂಕೀರ್ತನೆ ಮಾಡಿದರು. ಅವರ ಬಾಯಿಂದ ಭಾವಪೂರ್ಣವೂ ಅರ್ಥಗರ್ಭಿತವೂ ಆದ ಶ್ರೀಹರಿ ಸ್ತೋತ್ರಗಳು ಓತಪ್ರೋತವಾಗಿ ಹರಿದವು. ಸುತ್ತಲಿದ್ದ ಜನರು ದಾಸರ ಭಕ್ತಿಯನ್ನು ಮಹಿಮೆಯನ್ನು ಅರಿತು ಅವರನ್ನು ಗೌರವದಿಂದ ಕಂಡರು. ಅವರ ಕಷ್ಟಗಳು ಪರಿಹಾರವಾದವು. ಇದೆಲ್ಲವೂ ಶ್ರೀಹರಿಯ ಅನುಗ್ರಹದಿಂದಲೇ ಎಂದು ಅರಿತ ದಾಸರು ಐಹಿಕ ಭೋಗಗಳಿಗೆ ಒಲಿಯದೆ ಹರಿಯ ಪಾದವನ್ನೇ ನಿಶ್ಚಲವಾಗಿ ನಂಬಿದರು.

ವಿಜಯದಾಸರು ಇಪ್ಪತ್ತೈದು ಸಾವಿರಕ್ಕೂ ಹೆಚ್ಚಿನ ಕೃತಿಗಳನ್ನು ರಚಿಸಿದ್ದಾರೆಂಬ ಪ್ರತೀತಿ ಇದೆ. ಆದರೆ ನಮಗೆ ದೊರೆತಿರುವ ಅವರ ಕೃತಿಗಳ ಸಂಖ್ಯೆ ಸಾವಿರದ ಇನ್ನೂರನ್ನು ದಾಟದೆ.

ವಿಜಯದಾಸರ ಕೃತಿಗಳಲ್ಲಿ ಕಾಣುವ ಭಕ್ತಿ ಭಾವ ಅನನ್ಯವಾದದ್ದು. ಅವರ ದೃಷ್ಟಿಯಲ್ಲಿ ಲೌಕಿಕವಾದ ಆಶೆಗಳನ್ನು ಅಪೇಕ್ಷಿಸದೆ ತನ್ನ ಇಷ್ಟ ದೈವದಲ್ಲಿ ದೃಢವಾದ ನಂಬಿಕೆಯನ್ನು ಹೊಂದಿರುವುದೇ ನಿಜವಾದ ಭಕ್ತಿ. ಆನಂದದಿಂದ ಮೈಮರೆತು ಭಗವಂತನನ್ನು ಸ್ತುತಿಸುವುದೇ ನಿಜವಾದ ಭಕ್ತಿ. ಅಂಥ ನಿಶ್ಚಲವಾದ ಮನಸ್ಸನ್ನು ಕರುಣಿಸಬೇಕೆಂದು ವಿಠಲನಲ್ಲಿ ಬೇಡುತ್ತಾರೆ.

ಮನವೆ ನೀ ದೃಢವಾದರೆ ಮನಸಿ–
ಜನಯ್ಯನ ಚರಣ ಕಾಂಬೆನು
ಅತ್ತಲಿತ್ತ ಪೋಗದಿರು ಎನ್ನುತ
ವಿಜಯ ವಿಠಲ ಬರಲಿ

ಇತರರಲ್ಲಿ ಬೇಡುವ, ಅನ್ಯದೈವಗಳಲ್ಲಿ ಮೊರೆ ಹೋಗದ ಸ್ಥಿರ ಬುದ್ಧಿಯನ್ನು ನೀಡಬೇಕೆಂದು ಪ್ರಾರ್ಥಿಸುತ್ತಾರೆ.

ಶ್ರೀ ಚಿ. ನ. ಕೃಷ್ಣಮೂರ್ತಿ

ಸೇರಿದೆ ನನ್ನ ವೆಂಕಟರನ್ನ
ಪಾಲಿಸು ಎನ್ನ ಅ–
ಪಾರ ಜನುಮಕ್ಕೆ ನೀನೆ ದೈವವೆಂದು
ಶೂನ್ಯಜ್ಞನು ನಾನು ಅನ್ಯಥಾ
ಗತಿ ಅರಿಯೆ
ಅನ್ಯರಲ್ಲಿಗೆ ಕೊಡದೆ ಧನ್ಯನ
ಮಾಡೋ ಬಿಡದೆ

ಭಕ್ತನ ಹೃದಯದಲ್ಲಿ ತನ್ನ ದೈವವಲ್ಲದೆ ತನಗೆ ಗತಿ ಮತಿ ಇಲ್ಲ ಎಂಬ ಭಾವನೆ ಹುಟ್ಟಬೇಕು. ಆ ಕೂಗು ಭಗವಂತನನ್ನು ಮುಟ್ಟಬೇಕು. ದಾಸರ ಹೃದಯದಲ್ಲಿ ಅಂಥ ಭಾವನೆ ಹುಟ್ಟಿ ಪ್ರತಿಧ್ವನಿಸಿತು.

ಆವನ ಮೊರೆಯೊಗಲಿ ಆರಂಘ್ರಿಗೆರಗಲಿ
ಆರ ಕಾಡಲಿ ಆರೆನಲ್ಲೊ
ಆರಲ್ಲಿಗೆ ಪೋಗೆ
ಆರೆವೆಂದರೂ ಆರೆನಗಿಲ್ಲ ವಿಜಯವಿಠಲ
ನೀನೆಗತಿಯೊ

ಮನುಷ್ಯ ಮಾಡುವ ಸಕಲ ಪಾಪಗಳಿಗೂ ಅಹಂಕಾರವೇ ಕಾರಣವೆಂದು ತಿಳಿಸಿ ಅದರ ನಾಶಕ್ಕಾಗಿ ಬೇಡ ತ್ತಾರೆ.

ಅಹಂಕಾರವೆಂಬೊ ಪಾಪಿಯು
ಬೆನ್ನು ಬಿದ್ದರೆ
ಅಹಂಕಾರವಲ್ಲದೆ ಒಂದಿಷ್ಟು ಸುಖವಿಲ್ಲ
ಕಡಿಯಲು ಕೊನಿಯಿಂದ
ಬುಡನಾಶವಿಲ್ಲ
ಬುಡ ಹೊಯ್ದರೆ ಕೊನೆ ಒಡನೆ
ಒಣಗುವುದು
ದೃಢವಾದ ಅಹಂಕಾರ ಕಡಿದರೆ ಬಿಂಕದ
ಬಿಡಿ ಪಾಪಗಳೆಲ್ಲ ಅಡಗಿ
ದೂರವಾಗುವುವು
ತಡಿಯದೆ ವಿಶಿಷ್ಟ ವಿಜಯ ವಿಠಲ ನಿನ್ನ
ಅಡಿಗಳ ರುಚಿದೋರಿ ಬಿಡಿಸುವು–
ದಹಂಕಾರ

ಮಾನವನ ಆಸೆಗಳಿಗೆ ಇತಿ ಮಿತಿಯಿಲ್ಲ. ಒಂದು ದೊರಕಿದೊಡನೆ ಮತ್ತೊಂದನ್ನು ದೊರಕಿಸಿಕೊಳ್ಳುವ ದುರಾಸೆ. ವಿಜಯ ದಾಸರು ಮಾನವನ ಈ ಸ್ವಭಾವವನ್ನು ಹೀಗೆ ಬಣ್ಣಿಸಿದ್ದಾರೆ.

ಸಪ್ಪಡಿ ಮೆಲುವಾಗ ಉಪ್ಪಿನ ಯೋಚನೆ
ಉಪ್ಪು ದೊರೆತಾಗ ಸೊಪ್ಪಿನ ಯೋಚನೆ
ಸೊಪ್ಪು ದೊರೆತಾಗ ತುಪ್ಪದ ಯೋಚನೆ
ಕುಪ್ಪೆ ದೊರಕಿದಾಗ ಕೊಪ್ಪರಿಗೆ
ಯೋಚನೆ
ಕೊಪ್ಪರಿಗೆ ಉಂಟಾಗೆ ಸಪ್ತದ್ವೀಪದ
ಚಿಂತೆ

ಸಾಮಾನ್ಯವಾಗಿ ಮಾನವರು ತಾಪತ್ರಯಗಳನ್ನು ಪರಿಹರಿಸುವಂತೆ ಬೇಡುತ್ತಾರೆ. ಆದರೆ ದಾಸರಾದರೋ,

ತಾಪತ್ರಯಗಳು ತಾಳುವಂತೆ ಪ್ರೇರಿಸಿ
ಆಪತ್ತುಕಾಲಕ್ಕೆ ಧೈರ್ಯವೀಯೊ
ಅಪವರ್ಗವ ಒಲ್ಲೆ ಅನುದಿನ ನಿನ್ನ ನಖ
ದೀಪದ ಬೆಳಗಿನಲ್ಲಿ ಲೋಲ್ಯಾಡಿಸೊ

ಎಂದು ಬೇಡುತ್ತಾರೆ. ಮನುಷ್ಯನ ಬದುಕು ಹೊಟ್ಟೆ ಬಟ್ಟೆಗಳ ಸಂಪಾದನೆಗಾಗಿಯೆ ಹಗಲಿರಳು ವ್ಯರ್ಥವಾಗುತ್ತಿರುವುದನ್ನು ಕಂಡು ದಾಸರು ವ್ಯಥೆಪಟ್ಟು ಹೀಗೆ ನುಡಿದಿದ್ದಾರೆ,

ಮನವೆಂಬ ತರಗಲೆ ದುರ್ವಾಸನೆ ಎಂಬ
ಅನಿಲ ಬೀಸಲು ಹಾರಿ ಪೋಗತಿದೆ ಕೊ
ಎನಗೆ ಹಿಡಿವ ಶಕ್ತಿಯನ್ನು ಕಾಣೆ
ಕಾಣೆನೊ
ಕ್ಷಣವೊಂದರೊಳಗೆ ಕೋಟಿ
ಕೋಟಿ ಯೋ
ಜನ ಹಾರಿ ಮನಸು ಸುತ್ತ ಸುತ್ತುತಲಿದೆ
ಘನ ಮಹಿಮ ನಿನ್ನಂಘ್ರಿ,
ವನಜಯುಗಳ ಊರಿ
ಮನವೆಂಬ ತರಗೆಲೆಯನು
ಹಾರದಂತೆ ದಯ
ವನು ಮಾಡು ನಿನಗೆ
ವಂದನಗೈವೆ ಹರುಷದಲಿ

ಇಹದ ಆಶೆಗಳ ಗಾಳಿಗೆ ಸಿಲುಕಿದ ಮನಸ್ಸು ತರಗೆಲೆಯಂತೆ ಹಾರಿಹೋಗದಿರಲೆಂದು

ಕೇಳಿಕೊಳ್ಳುತ್ತಾರೆ. ಮನಸ್ಸನ್ನು ನಿಗ್ರಹಿಸುವುದು ಅತಿ ಕಷ್ಟ. ಅದು ಗಾಳಿಗೊಡ್ಡಿದ ದೀಪದಂತೆ ಎಂಬುದನ್ನು ವಿಜಯದಾಸರು ಪರಿಪರಿಯಾಗಿ ಹೇಳಿದ್ದಾರೆ.

ಮುರಿದೋಡಿ ಬರುವ ರಣರಂಗ
ನಿಲಿಸಬಹುದು
ಹರಿವ ನದಿಗಳ ನಿಲ್ಲಿಸಬಹುದು
ಕರಿಸೊಕ್ಕಿ ಬರುತಿರಲು ನಿಲ್ಲಿಸಬಹುದು
ದುರುಳಮನ ನಿಲಿಸುವುದು ಸುರರಿಗಳವಲ್ಲ

ಮನಸ್ಸಿನ ಈ ದೌರ್ಬಲ್ಯವನ್ನು ತಿಳಿದ ದಾಸರು ಕ್ಷಣ ಕ್ಷಣಕ್ಕೂ ಆತ್ಮಶೋಧನೆ ಮಾಡಿಕೊಳ್ಳುತ್ತ ಅನ್ಯ ವಿಷಯಕ್ಕೆಳಸದೆ ಪ್ರತಿ ಕ್ಷಣವೂ ಹರಿಯ ನಾಮ ಶ್ರವಣ, ಮನನ, ಧ್ಯಾನದಲ್ಲಿ ಕಳೆದು ಭಗವದನುಗ್ರಹವನ್ನು ತಾವೂ ಪಡೆದು ಸುಲಭವೂ ಸರಳವೂ ಆದ ಭಕ್ತಿಮಾರ್ಗವನ್ನು ಅನ್ಯರಿಗೂ ಬೋಧಿಸಿದರು.

ವಿಜಯದಾಸರ ಕೃತಿಗಳಲ್ಲಿ ಭಕ್ತಿ ಭಾವದೊಂದಿಗೆ ತಾತ್ತ್ವಿಕ ವಿಚಾರ ಧಾರೆಯನ್ನು ಕಾಣಬಹುದು ಭಗವಂತನಾದ ಶ್ರೀಹರಿ ಅಣುರೇಣುತೃಣ ಕಾಷ್ಠಗಳಲ್ಲಿಯೂ ಇದ್ದಾನೆ, ಆತ ಸರ್ವಶಕ್ತ, ಸರ್ವಾಂತರ್ಯಾಮಿ ಎಂಬುದನ್ನು ದಾಸರು ಹೀಗೆ ನುಡಿದಿದ್ದಾರೆ.

ಹರಿಯೇ ಸರ್ವೋತ್ತಮ ಹರಿಪರದೇವತೆ
ಹರಿಗುಣಪರಿಪೂರ್ಣಾಂತರ ಬಹಿರ್ ವ್ಯಾಪ್ತ
ಹರಿಪರತತ್ತ್ವ ಶಿರಿಯರಸಾ ಪರಮೇಷ್ಟಿ
ಜನಕಾ
ಹರ ಸುರಮುಖ್ಯ ಭೂಸುರರ
ಪರಿಪಾಲಾ
ಹರಿಯೇ ಜಗತ್‌ಕರ್ತಾ ಹರಿಯೇ
ಜಗತ್ ಭರ್ತಾ

ಶ್ರೀಹರಿಯೆ ಸರ್ವಕಾರ್ಯಗಳಿಗೂ ಪ್ರೇರಕ ಶಕ್ತಿ. ಆತನ ಪ್ರೇರಣೆಯಿಂದಲೇ ಜೀವರು ತಮ್ಮ ಸಕಲ ಕರ್ಮಗಳನ್ನು ಮಾಡುತ್ತ ಹೋಗುತ್ತಾರೆ.

ಜ್ಞಾನೇಂದ್ರಿಯದಲ್ಲಿ ನೀನೇ ವಾಸವಾಗಿ
ಕರ್ಮೇಂದ್ರಿಯದಲ್ಲಿ ನೀನೆ ವಾಸ
ಜ್ಞಾನಕರ್ಮೇಂದ್ರಿಯಗಳು ನುಡಿಸುವ
ನಡೆಸುವ
ಸ್ಥಾನದಲಿ ಸರ್ವ ಬಿಡದೆ ನೀನೆ ವಾಸ
ನೀ ನೋಡಿದರಾನು ನೀ ಓಡಿದರಾನು
ನೀನಡೆದರಾನು
ನೀನೇ ನಾನಾ ಇಂದ್ರಿಯದ ಒಳಗಿದ್ದು
ಏನೇನು ಪರಿಮಾಡೊ ನಾನದರಂತೆ
ಚರಿತೆಯೊಳಗಿಪ್ಪೆ
ನೀನಲ್ಲದೆ ಸ್ವತಂತ್ರ ಪುರುಷರುಂಟೆ
ನೀನೆ ನಿರ್ದೋಷ ವಿಜಯ ವಿಠಲರಾಯ
ನೀನೆ ಕಾರಣ ಸರ್ವ ಜಗತ್ತತ್ತ್ವಕ್ಕೆ

ಶುದ್ಧವಾದ ಜ್ಞಾನ. ನಿರ್ಮಲವಾದ ಭಕ್ತಿ ಇವುಗಳಿಂದ ಕೂಡಿದ ಧ್ಯಾನದಿಂದಲೇ ಮುಕ್ತಿ ಎಂದು ದಾಸರು ತಿಳಿಸಿದ್ದಾರೆ.

ಧ್ಯಾನದಿಂದೆ ಜ್ಞಾನವುಂಟು
ಧ್ಯಾನರಹಿತನಾದ ಮನುಜ
ರೇನು ಕರ್ಮವ ಮಾಡಲೇನು
ಆನೆ ಕಪಿತ್ಥ ನುಂಗಿದಂತೆ

ಜ್ಞಾನ, ಭಕ್ತಿ, ಧ್ಯಾನ ಇವುಗಳನ್ನು ತಿಳಿಸಿರುವುದರ ಜೊತೆಗೆ ನಮ್ಮ ನಡತೆಯನ್ನು ಕುರಿತು ಹೇಳಿದ್ದಾರೆ. ಮನೆಗೆ ಬಂದ ಅತಿಥಿ ಅಭ್ಯಾಗತರನ್ನು ಉಚಿತ ರೀತಿಯಲ್ಲಿ ಸತ್ಕರಿಸಿ ಸಂತೋಷಪಡಿಸಬೇಕು. ಭಕ್ತನೊಬ್ಬನಿಗೆ ಹಿಂದು ದಿನ ಊಟಕ್ಕಿಟ್ಟರೆ ಅದರಿಂದ ದೊರೆಯುವ ಪುಣ್ಯಕ್ಕೆ ಎಣೆಯಿಲ್ಲವೆನ್ನುತ್ತಾರೆ.

ಉತ್ತಮರಿಗೆ ಹಿಂದು ತುತ್ತನ್ನು
ದಾನದಿಂದ
ಇತ್ತವನ ಕುಲ ಹತ್ತು ಹತ್ತು ಹಿಂದು ಸ
ಪುತ್ರ ಗೋತ್ರಾಖಿಳ ಹತ್ತಿ
ಹೊಂದಿದವರು
ಸುತ್ತಣ ಪರಿವಾರ ಎತ್ತಲೆತ್ತ
ಉಳ್ಳವರು
ಅತ್ಯಂತವಾದ ಪಾಪ
ಮೊತ್ತದಾಸಕ್ತರಾಗಿ
ಮೃತ್ಯುಲೋಕದಲಿ ಆಪತ್ತು
ಬರುತಲಿರೆ
ಹೆತ್ತ ಜನನಿಯಂತೆ ಎತ್ತಿಕೊಂಡೊಯ್ದು
ಪುನರಾ
ವರ್ತಿಯಿಲ್ಲದ ಲೋಕದತ್ತ ಸೇರಿಸುವುದು

ಹೀಗೆ ವಿಜಯದಾಸರ ಕೃತಿಗಳಲ್ಲಿ ತಾತ್ತ್ವಿಕ ಚೆಲಿಮುಳ್ಳ. ಪರಮಾತ್ಮನ ಶಕ್ತಿ, ಭಕ್ತನ ಹಾದಿಯಲ್ಲಿ ಬರುವ ತೊಂದರೆಗಳು ಮತ್ತು ಅವುಗಳ ನಿವಾರಣೆ, ಧ್ಯಾನ. ಧರ್ಮ ಸೂಕ್ಷ್ಮಗಳು. ಜೀವದ ಕರ್ತವ್ಯ ಕರ್ಮಾಚರಣೆ, ಭಗವಂತನ ಕರುಣೆ ಮೊದಲಾದ ಅನೇಕ ವಿಚಾರಗಳನ್ನು ಕಾಣಬಹುದಾಗಿದೆ. ಅವುಗಳ ಅಧ್ಯಯನದಿಂದ ಸೃಷ್ಟಿಯ ಅನೇಕ ರಹಸ್ಯಗಳನ್ನು ತಿಳಿದು ಭಗವಂತನ ಕೃಪೆಗೆ ಪಾತ್ರರಾಗಲು ಸುಲಭಮಾರ್ಗ ತಿಳಿಯುತ್ತದೆ

ಪುಣ್ಯಕ್ಷೇತ್ರಗಳ ಸಂದರ್ಶನ ಹರಿದಾಸರ ಬದುಕಿನಲ್ಲಿ ಮುಖ್ಯವಾದ ಸ್ಥಾನ ಪಡೆದಿತ್ತು. ಆದ್ದರಿಂದಲೇ ದಾಸರುಗಳಲ್ಲಿ ಅನೇಕರು ತೀರ್ಥಕ್ಷೇತ ಗಳ ಬಗ್ಗೆ ಅನೇಕ ಕೃತಿಗಳನ್ನು ರಚಿಸಿದ್ದಾರೆ. ವಿಜಯದಾಸರೂ ಸಹ ಅನೇಕ ಕ್ಷೇತ್ರಗಳ ಮಹಿಮೆಯನ್ನು ವರ್ಣಿಸುವ ಕೃತಿಗಳನ್ನು ರಚಿಸಿದ್ದಾರೆ. ವಿಜಯದಾಸರು ತಿರುಪತಿ ವೆಂಕಟೇಶನನ್ನು ಕುರಿತು ಸುಮಾರು ತೊಂಬತ್ತು ಕೃತಿಗಳನ್ನು ರಚಿಸಿದ್ದಾರೆ. ತಿರುಪತಿ ತಿಮ್ಮಪ್ಪನ ದರ್ಶನದಿಂದ ಭಕ್ತಿ ಪರವಶರಾದ ದಾಸರು ಆ ಮಂಗಳ ಮೂರ್ತಿಯ ಸುಂದರ ರೂಪು, ಗುಣ, ಮಹಿಮೆಗಳನ್ನು ನಾನಾ ರೀತಿಯಲ್ಲಿ ಹಾಡಿ ಆನಂದಿಸಿದ್ದಾರೆ. ಸಪ್ತಗಿರಿ ಅವರ ಕಣ್ಣಿಗೆ ಕೇವಲ ಬೆಟ್ಟವಲ್ಲ;

ಶಿಲೆಯು ಸಾಲಿಗ್ರಾಮ ಹೊಳೆಯು
ಸುದರುಶನ
ಥಳಥಳಿಸುವ ಮಳಲೆ ಚಕ್ರಾಂಕಿತ
ಇಳೆಯೊಳಗಿದೆ ನಿಶ್ಚಲ ವೈಕುಂಠನಗರ
ಸಲೆ ಶ್ವೇತದ್ವೀಪ ಇದೆ ಪೊಳೆನನಂತಾಸನ
ಸ್ಥಳವೆಂದು ಉತ್ತಮರು ತಿಳಿದು
ಮನ್ನಿಸುವರು

ವೆಂಕಟೇಶನ ಚಿತ್ರವನ್ನು ದಾಸರು ಬಣ್ಣಿಸಿರುವ ರೀತಿ ಇದು.

ತರಣಿ ಶತಕೋಟಿ
ರುಚಿಗಧಿಕವೆಂದೆನಿಸುವ
ತಿರುಪತಿದಾಸನ ವರಕಿರೀಟವ ಕಂಡೆ

# ತಿರುಮಲೆ
## ಶ್ರೀ ವೆಂಕಟೇಶ್ವರಸ್ವಾಮಿ ಅರ್ಚನಾ ಯೋಜನೆ

ಭಕ್ತರು ತಮ್ಮ ಇಷ್ಟದೈವವಾದ ಶ್ರೀ ವೆಂಕಟೇಶ್ವರಸ್ವಾಮಿಯನ್ನು ಅರ್ಚಿಸಲು ಅನುಕೂಲವಾಗುವಂತೆ ತಿರುಮಲೆ ತಿರುಪತಿ ದೇವಸ್ಥಾನದವರು ಹೊಸದಾಗಿ ಬಾಲಾಜೀ ಅರ್ಚನಾ ಯೋಜನೆಯನ್ನು ಆರಂಭಿಸಿದ್ದಾರೆ.

### ಈ ಯೋಜನೆಯಲ್ಲಿ ಸದಸ್ಯರಾಗುವುದು ಹೇಗೆ?

ನೀವು ಮಾಡಬೇಕಾಗಿರುವುದೆಂದರೆ ಇಂಡಿಯನ್ ಓವರ್‌ಸೀಸ್ ಬ್ಯಾಂಕ್ ಮೂಲಕ ತಿ. ತಿ. ದೇ. ಗಳಿಗೆ ರೂ 5586–00 ಸಲ್ಲಿಸುವುದು. ಇದರ ಪ್ರತಿಫಲವಾಗಿ ಹತ್ತು ವರ್ಷಗಳ ಕಾಲ ವರ್ಷಕ್ಕೊಮ್ಮೆ ನೀವು ಬಯಸಿದ ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಅರ್ಚನೆ ಮಾಡುವ ಮಹದ್ಭಾಗ್ಯ ನಿಮ್ಮದಾಗುತ್ತದೆ.

ನೀವು ಸಲ್ಲಿಸಿದ ಹಣ ಹತ್ತು ವರ್ಷಗಳಲ್ಲಿ 15000 ರೂ ಗಳಾಗಿ ಶ್ರೀ ವೆಂಕಟೇಶ್ವರಸ್ವಾಮಿಗೆ ಸೇರುವುದು. ಹಾಗಾಗಿ ಶ್ರೀ ವೆಂಕಟೇಶ್ವರ ಸ್ವಾಮಿಗೆ ಈ ಮೊತ್ತವನ್ನು ಅರ್ಪಿಸಿದ ತೃಪ್ತಿಯೂ ನಿಮಗೆ ದೊರೆಯುತ್ತದೆ.

### ಸೌಲಭ್ಯಗಳು :

ಅರ್ಚನೆಯ ದಿನದಂದು ದಾನಿಗಳಿಗೆ ತಿರುಮಲೆಯಲ್ಲಿ ವಸತಿ ಸೌಕರ್ಯ ಕಲ್ಪಿಸಲಾಗುತ್ತದೆ. ದಂಪತಿಗಳು ಅರ್ಚನ ಸೇವೆಯಲ್ಲಿ ಪಾಲುಗೊಳ್ಳಬಹುದು. ಕುಟುಂಬದ ಮೂವರಿಗೆ ಸುಪ್ರಭಾತದರ್ಶನ, ಪ್ರತ್ಯೇಕ ದರ್ಶನವುಂಟು. ಜೊತೆಗೇ ಉತ್ತರೀಯ ಅಥವಾ ಕುಪ್ಪುಸದ ಕಣ, ಪ್ರಸಾದಗಳುಂಟು.

**ಕಾರ್ಯನಿರ್ವಹಣಾಧಿಕಾರಿ**
**ತಿ. ತಿ. ದೇ.**

ಶಿರದಲ್ಲಿ ಮುಡಿದಿದ್ದ ಪರಿಪರಿಯ
ಕುಸುಮಗಳು
ಅರಳಿ ಪರಿಮಳಿಸುತ್ತ ಹರಿಯುತಿದೆ
ದೆಸೆದೆಸೆಗೆ
ಹರಿಣ ಕುರುಹಿನ ತೆರದಿ ನೊಸಲ
ಕಸ್ತೂರಿ ತಿಲಕ
ಸರಸಿಜದಳವ ಧಿಕ್ಕರಿಸುವ ನಯನನ
ಕಂಡೆ
ಸ್ಮರನ ಕರದಿಂದ ನ್ಯಾವರಿಸಿದ
ಚಾಪವೆನೆ
ಎರಡು ಪೆರ್ಬುಬ್ಬುಗಳು
ತಿರುಹುತಿಪ್ಪುದ ಕಂಡೆ
ಭರದಿಂದ ತೂಗುವತಿ ಮಕರ ಕುಂಡಲ
ಕಾಂತಿ
ಮಿರುಗುತಿರೆ ಗಲ್ಲದಲ್ಲಿ ಸರಳನಾಸಿಕ
ಕಂಡೆ
ಎರಡು ಸಾಲಪಂಕ್ತಿ ದಂತಗಳೆಸೆಯೆ
ಕರ್ಪೂರ
ಕರಡಿಗೆಯಂದದಲಿ ವದನ ಎಳೆನಗೆ ಕಂಡೆ

ಕರ್ನಾಟಕ ಹರಿದಾಸವಾಙ್ಮಯ ಕನ್ನಡಿಗರ ಸಾಂಸ್ಕೃತಿಕ ಸಂಪತ್ತಾಗಿದೆ ವಿಜಯದಾಸರು ತಮ್ಮ ಕೃತಿಗಳಿಂದ ಕನ್ನಡ ಸಂಸ್ಕೃತಿ, ಸಾಹಿತ್ಯ – ಎರಡನ್ನೂ ಅಭಿವೃದ್ಧಿಗೊಳಿಸಿದರು. ಅವರ ಒಂದೊಂದು ಕೃತಿಯೂ ಭಕ್ತಿಯ ಮಡು, ತತ್ತ್ವಗಳ ಗಣಿಯಾಗಿದೆ ಜ್ಞಾನ, ಭಕ್ತಿ ಆಧ್ಯಾತ್ಮಿಕ ವಿಚಾರಗಳು ಹೃದಯದಲ್ಲಿ ಮಥಿಸಿ ಸಹಜ ಸರಳವಾಗಿ ಪ್ರಕಟವಾದಾಗ ಅವುಗಳಲ್ಲಿ ಕಾವ್ಯ ಸೌಂದರ್ಯವೂ ಕಂಗೊಳಿಸಿದೆ. ಹೀಗೆ ವಿಜಯದಾಸರ ಕೃತಿಗಳು ಭಕ್ತಿ, ತಾತ್ತ್ವಿಕ ಚಿಂತನ, ಕಾವ್ಯದ ಸೊಗಸುಗಳಿಂದ ಕೂಡಿದ್ದು ಹರಿದಾಸ ಸಾಹಿತ್ಯದಲ್ಲಿ ವಿಶಿಷ್ಟವಾದ ಸ್ಥಾನ ಪಡೆದಿವೆ. ಕನ್ನಡ ನಾಡಿನ ಸಂತ ಶ್ರೇಷ್ಠರಲ್ಲಿ ಒಬ್ಬರಾ‿ ವಿಜಯದಾಸರ ಜೀವನ, ಸಾಧನೆ, ಸಿದ್ಧಿಗಳು ಸರ್ವರಿಗೂ ಸರ್ವಕಾಲಕ್ಕೂ ಆದರ್ಶಯೋಗ್ಯವಾಗಿದೆ.



# ಪ್ರತ್ಯಭಿಜ್ಞಾ ದರ್ಶನ

ಕ್ರಿಸ್ತಶಕದ ಆದಿಕಾಲದಿಂದಲೂ ಮಹಾ ಶಿವ ರುದ್ರನ ಆರಾಧನೆಯು ಭಾರತದ ಅನೇಕ ಭಾಗಗಳಲ್ಲಿ ರೂಢಿಯಾಗಿದ್ದುದಕ್ಕೆ ಗ್ರಂಥಗಳಲ್ಲಿಯೂ ಶಾಸನಗಳಲ್ಲಿಯೂ ಅನೇಕ ಆಧಾರಗಳು ಸಿಕ್ಕಿವೆ. ಅವುಗಳು ಪ್ರತ್ಯೇಕ ಮತ ಅಥವಾ ಪಂಥಗಳಾಗಿ ವೈಷ್ಣವಮತದೊಡನೆಯೇ ಸಮಾನಕಾಲದಲ್ಲಿ ಬೆಳೆದು ಬಂದಂತೆ ಕಾಣುತ್ತವೆ. ಅವುಗಳಲ್ಲಿ ಪಾಶುಪತ ಅಥವಾ ಕಾಳಾಮುಖವು ಪ್ರಾಚೀನಕಾಲದಿಂದ ಇದ್ದುದಕ್ಕೆ ಸೂಚನೆಗಳಿವೆ. ಮುಂದೆ ಕಾಲಾನುಕ್ರಮದಲ್ಲಿ ಭರತ ಖಂಡದ ಒಂದೊಂದು ಭಾಗದಲ್ಲಿ ಒಂದೊಂದು ಹೆಸರಿನಿಂದ ಪ್ರಸಿದ್ಧವಾಗಿದೆ. ಬಂಗಾಳದಲ್ಲಿ ಶಾಕ್ತ ಸಂಪ್ರದಾಯವೆಂದೂ, ತಮಿಳುನಾಡಿನಲ್ಲಿ ಶೈವಸಿದ್ಧಾಂತವೆಂದೂ, ಕರ್ನಾಟಕದಲ್ಲಿ ವೀರಶೈವ ಅಥವಾ ಶಕ್ತಿ ವಿಶಿಷ್ಟಾದ್ವೈತವೆಂದೂ, ಕಾಶ್ಮೀರದಲ್ಲಿ ತ್ರಿಕ ಅಥವಾ ಪ್ರತ್ಯಭಿಜ್ಞಾದರ್ಶನವೆಂದೂ, ವಿವಿಧ ರೂಪಗಳಲ್ಲಿ ಬೆಳೆದು ಬಂದಿದೆ. ಇವುಗಳಲ್ಲಿ ಸಾಂಪ್ರದಾಯಕ ಭಿನ್ನತೆಗಳಿದ್ದರೂ ಮೂಲತತ್ತ್ವಗಳಲ್ಲಿ ಏಕರೂಪತೆಯಿದೆ. ಆದರಂತೆ ಕಾಶ್ಮೀರದ ಶೈವಸಿದ್ಧಾಂತವೂ ತತ್ತ್ವಗಳನ್ನು ತನ್ನದೇ ಆದ ವಿಶಿಷ್ಟ ರೀತಿಯಲ್ಲಿ ಪ್ರತಿಪಾದಿಸುತ್ತದೆ.

ಈ ಪಂಥಕ್ಕೆ 'ಪ್ರತ್ಯಭಿಜ್ಞಾದರ್ಶನ' ವೆಂದು ಹೆಸರು. ಇದು 'ಅಖ್ಯಾತಿ' ವಾದವನ್ನು (ಭೇದಾಗ್ರಹ) ಅಂಗೀಕರಿಸಿದೆ. ಆದರೆ ಇದರಲ್ಲಿ ಅಭೇದವಾದ, ಭೇದಾಭೇದವಾದ, ಭೇದವಾದ–ಈ ಮೂರೂ ಪರಸ್ಪರ ವಿರೋಧವಿಲ್ಲದೆ ಸಮನ್ವಯಮಾಡಲ್ಪಟ್ಟಿವೆ. ಶೈವ ಮತ್ತು ಶಾಕ್ತ ಸಂಪ್ರದಾಯಗಳಿಗಿರುವ ವ್ಯತ್ಯಾಸವನ್ನು ಪರಿಹರಿಸಿ ಶಕ್ತಿಯು ಶಿವಾಭಿನ್ನವೆಂದು ಸ್ಥಾಪಿಸಲ್ಪಟ್ಟಿದೆ. ಇದರಿಂದ ಪರಾ, ಪಶ್ಯಂತೀ, ಮಧ್ಯಮಾ, ವೈಖರೀ ಎಂಬ ನಾಲ್ಕು ರೀತಿಯ ಶಕ್ತಿಯ ಪ್ರಕಾರಗಳನ್ನು ಉಪಾಸನಾರೂಪದಿಂದ ಆರಾಧಿಸುವ ಕ್ರಮದಿಂದ ಶಬ್ದಬ್ರಹ್ಮ ವಾದಿಗಳ ಸರಣಿಯನ್ನು ಒಳಗೊಂಡಿದೆ. ಉಪನಿಷತ್ತುಗಳ ಸಂಪ್ರದಾಯವನ್ನೂ ತನ್ನಲ್ಲಿ ಅಡಕ ಮಾಡಿಕೊಂಡಿದೆ. ಪ್ರಾಣಾಯಾಮಾದಿಗಳನ್ನು ಸಾಧನಾಕ್ರಮದಲ್ಲಿ ಅಂಗೀಕಾರ ಮಾಡಿರುವುದರಿಂದ ಯೋಗದರ್ಶನವೂ ಒಂದು ರೀತಿಯಲ್ಲಿ ಇದರಲ್ಲಿ ಸೇರಿಕೊಂಡಿದೆ. ತತ್ತ್ವಗಣನೆಯಲ್ಲಿ ಸಾಂಖ್ಯರ ಇಪ್ಪತ್ತೈದು ತತ್ತ್ವಗಳೂ ಮಿಳಿತವಾಗಿವೆ. ಶೈವಾಗಮಗಳೂ ಇಲ್ಲಿ ರೂಪಾಂತರವಾಗಿವೆ. ಆದುದರಿಂದ ಇದು ಅನೇಕಪಂಥಗಳ ಸಾರವತ್ತಾದ ಭಾಗಗಳ ಸಮನ್ವಯವಾಗಿದೆ.

ಈ ಸಿದ್ಧಾಂತವು ತ್ರಿಕ, ಸ್ಪಂದ ಮತ್ತು ಪ್ರತ್ಯಭಿಜ್ಞಾ ಎಂಬ ಮೂರು ಭಿನ್ನ ನಾಮಧೇಯಗಳಿಂದ ಸಂಬೋಧಿತವಾಗುತ್ತಿದೆ. (ಸ್ಪಂದ ಮತ್ತು ಪ್ರತ್ಯಭಿಜ್ಞಾಗಳು ಪ್ರತ್ಯೇಕ ಶಾಖೆಗಳೆಂದು ಕೆಲವರ ಮತ) ತ್ರಿಕ ಶಾಸ್ತ್ರವೆಂದರೆ ಪತಿ, ಪಶು, ಪಾಶ ಎಂಬ ಮೂರು ಪ್ರಧಾನ ಭಾಗಗಳನ್ನುಳ್ಳ ಶಾಸ್ತ್ರವೆಂದರ್ಥ. ಪತಿಯೇ ಪರ ಶಿವ, ಪಶುವೇ ಜೀವ, ಪರಶಿವನಿಂದ ಜೀವನನ್ನು ಬೇರ್ಪಡಿಸಿ ಜೀವನನ್ನು ಸಂಸಾರಾವಸ್ಥೆಯಲ್ಲಿಟ್ಟಿರುವ ಬಂಧ ಪಾಶ, ಜೀವ ಶಿವರ ಅಭಿನ್ನತೆಯ ಅರಿವುಂಟಾದಾಗ ಪಾಶವು ಮಾಯವಾಗುವುದು. ಪಾಶವು ಮಲವೆಂದು ಕರೆಯಲ್ಪಡುತ್ತದೆ. ಮಲನಿವೃತ್ತಿಯಾದಾಗ ಮೋಕ್ಷಪ್ರಾಪ್ತಿಯಾಗುತ್ತದೆ.

ಪರಿಪೂರ್ಣನಾದ ಶಿವನು ಪರಿಮಿತವಾದ ವಿಶ್ವವನ್ನು ಪ್ರಕಾಶಪಡಿಸುವುದಕ್ಕಾಗಿ ತನ್ನ ಶಕ್ತಿಗಳನ್ನು ಪ್ರಸರಿಸುತ್ತಾನೆ. ಈ ಪ್ರಸಾರ ಕಾರ್ಯದ ಪ್ರಥಮ ಸ್ಫುರಣೆಯೇ ಸ್ಪಂದವೆನ್ನಿಸಿಕೊಳುತ್ತದೆ. ಸ್ಪಂದ, ಕಂಪನ, ಚಲನ, ಉನ್ಮೇಷ ಇವೆಲ್ಲ ಏಕಾರ್ಥವಾಚಿಗಳು, ಮೂಲದಲ್ಲಿ ವಿಕಾರವಿಲ್ಲದೆ ಶಕ್ತಿಯ ವಿಕಾಸವನ್ನುಂಟುಮಾಡುವುದಕ್ಕೆ ಸ್ಪಂದವೆಂದು ಸಂಜ್ಞೆ, ವಿಶ್ವದ ಭೇದಗಳು ಅನಂತವಾಗಿದ್ದರೂ ಸ್ಪಂದದ ಮಹಿಮೆಯಿಂದ ಒಂದೊಂದು ಪದಾರ್ಥವೂ ಗುಣ, ಕ್ರಿಯೆ, ಆಕಾರ ವ್ಯವಹಾರಗಳಲ್ಲಿ ಭಿನ್ನಭಿನ್ನವಾಗಿ ಕಾಣುತ್ತವೆ. ಅವುಗಳ ತಾರತಮ್ಯವೂ ಸ್ಪಂದದ ಮಿತಿಯಿಂದಲೇ ರೂಪಗೊಂಡಿದೆ. ಸ್ಪಂದ ದೃಷ್ಟಿಯಿಂದ ಒಂದೊಂದು ವ್ಯಕ್ತಿಯನ್ನೂ ಪದಾರ್ಥವನ್ನು ಅರಿತರೆ, ಐಕ್ಯ ಮತ್ತು ಭಿನ್ನತೆಗಳು ಒಂದರಲ್ಲೇ ಅಡಕವಾಗಿರುತ್ತದೆಂಬುದು ಗೋಚರವಾಗುತ್ತದೆ. ಇದರ ಅರಿವಿನಿಂದ ಸ್ವಪರಿಮಿತಿ, ಶಕ್ತಿಯೋಗ್ಯತೆಗಳ ಜ್ಞಾನವುಂಟಾಗುತ್ತದೆ. ಆದುದರಿಂದ ಸತ್ತ್ವ, ರಜಸ್ ತಮಸ್ಸುಗಳ ಪ್ರಭಾವವು ಚಿತ್ ಸ್ಪಂದದಿಂದಲೇ ಹೊರಟಿದ್ದರೂ, ಎಷ್ಟೇ ವಿಕಾರಗಳನ್ನೂ ಹೊಂದಿದ್ದರೂ, ವಿಶ್ವವು ಶಿವಾಭಿನ್ನವಾಗಿದೆಯೆಂದೂ, ವಿಶ್ವದ ವ್ಯವಹಾರವೆಲ್ಲ ಸ್ಪಂದದ ಚಮತ್ಕಾರವೆಂದೂ, ಪರಿಪೂರ್ಣವಾದ ಶಿವನಲ್ಲಿ ಯಾವ ವ್ಯತ್ಯಾಸವೂ ಉಂಟಾಗುವುದಿಲ್ಲವೆಂದೂ ಬೋಧವಾಗುತ್ತದೆ. ಇದರ ಅನುಸಂಧಾನದಿಂದ ಸ್ವರೂಪವಿಕಾಸವಾಗುವುದು. ಸುಖ ದುಃಖ, ಗ್ರಾಹ್ಯಗ್ರಾಹಕ ಮೌಢ್ಯವಿಲ್ಲದಿರುವಿಕೆಯೇ ಸ್ವರೂಪ ವಿಕಾಸ– ಇದೇ ಮೋಕ್ಷ.

ಈ ಪಂಥದಲ್ಲಿ ಉಕ್ತವಾಗಿರುವ 'ಪ್ರತ್ಯಭಿಜ್ಞಾ' ಎಂಬ ಪದವು ಈ ಶಾಸ್ತ್ರದ ಪರಮ ರಹಸ್ಯವನ್ನು ಪ್ರಕಾಶಿಸುತ್ತದೆ. 'ಪ್ರತ್ಯಭಿಜ್ಞಾ' ಎಂದರೆ ಅವನೇ ನಾನು–ಆ ಶಿವನೇ ನಾನು ಎಂದು ಮಲಾವೃತನಾದ ಜೀವನು ತನ್ನ ಸಹಜಸ್ವರೂಪವನ್ನು ಗುರುತಿಸುವುದು. ಅಂದರೆ ಜೀವನು ತನ್ನ ಅನುಭವಕ್ಕೆ ಬರುತ್ತಿರುವ ಭೇದಜ್ಞಾನಗಳನ್ನೂ ಪ್ರಶಾಂತ ಸ್ಥಿತಿಯಲ್ಲಿರುವ ಶಿವನ ಪಂಚಕೃತ್ಯಗಳನ್ನು ಜಾಗ್ರತ್, ಸ್ವಪ್ನ ಸುಷುಪ್ತ್ಯಾದಿ ಅವಸ್ಥೆಗಳನ್ನೂ ಧ್ಯಾನಾಭ್ಯಾಸಾದಿಗಳಿಂದ ಮನನ ಮಾಡಿ ಶಾಸ್ತ್ರದ ತತ್ತ್ವಸರಣಿಯಿಂದಲೂ ತನ್ನ ಅನುಭವಜ್ಞಾನದಿಂದಲೂ ಪ್ರತಿಬೋಧಿತನಾಗಿ ತಾನೇ ಆ ಶಿವನು ಎಂದು ತನ್ನ

ಡಾ॥ ಎನ್. ಅನಂತರಂಗಾಚಾರ್

ಸ್ವರೂಪವನ್ನು ಗುರುತಿಸುವಿಕೆಯೇ ಪ್ರತ್ಯಭಿಜ್ಞೆ.

ಈ ಶಾಸ್ತ್ರದ ಪ್ರಕಾರ ಈಶ್ವರ ಮತ್ತು ಅವನಿಂದ ಸೃಷ್ಟಿಸಲ್ಪಟ್ಟ ವಿಶ್ವ ಇವೆರಡೂ ಸತ್ಯ. ಚಿಚ್ಛಕ್ತಿಯು ಕಾರಣ, ವಿಶ್ವವು ಕಾರ್ಯ, ಚಿಚ್ಛಕ್ತಿಯೂ ವಿಶ್ವವೂ ಅಭಿನ್ನ. ಶಕ್ತಿಯ ಪ್ರಸರವೇ ವಿಶ್ವ. ಒಂದು ಆಧಾರ, ಮತ್ತೊಂದು ಆಧೇಯ, ಆಧಾರವು ಆಧೇಯಕ್ಕೆ ಅಧೀನ. ಈಶ್ವರನು ತನ್ನಲ್ಲಿಯೇ ತನ್ನ ಸಂಕಲ್ಪದಿಂದಲೇ ವಿಶ್ವವನ್ನು ಪ್ರಕಾಶಿಸಿಕೊಳ್ಳುತ್ತಾನೆ. ಅಂದರೆ ತನ್ನಲ್ಲಿಯೇ ಸೂಕ್ಷ್ಮವಾಗಿರುವುದನ್ನು ಸ್ಥೂಲವಾಗಿ ವಿಶ್ವವಾಗಿ ಪ್ರಕಟಿಸಿಕೊಳ್ಳುತ್ತಾನೆ. ಆದುದರಿಂದ ವಿಶ್ವವು ಭಿನ್ನಪದಾರ್ಥದಿಂದ ಪ್ರಕಟವಾದುದಲ್ಲ. ಅದು ಅವನ ಸೂಕ್ಷ್ಮಶಕ್ತಿಯ ಉನ್ಮೀಲನ, ಪ್ರತ್ಯಕ್ಷ. ಅರಳುವಿಕೆ. ಶಾಸ್ತ್ರಾಭ್ಯಾಸದಿಂದ ತಿಳಿದ ಜ್ಞಾನದಮೂಲಕ ಆತ್ಮಸಾಕ್ಷಾತ್ಕಾರ ಮಾಡಿಕೊಳ್ಳುವುದಕ್ಕೆ ಅನುಮಾನ ಮತ್ತು ಶಬ್ದಪ್ರಮಾಣಗಳು ಸ್ವತಂತ್ರವಾದ ಈ ಸಂಪ್ರದಾಯದ ವೈಶಿಷ್ಟ್ಯ. ಇತರ ಪಂಥಗಳಲ್ಲಿರುವಂತೆಯೇ ಇಲ್ಲಿಯೂ ಸಂಸಾರಕ್ಕೆ ಕಾರಣ ಮಾಯೆಯೇ, ಆದರೆ ಇಲ್ಲಿ ಮಾಯೆ, ಅವಿದ್ಯೆ, ಅಜ್ಞಾನ ಎಂದರೆ ಜ್ಞಾನವೇ ಇಲ್ಲದಿರುವಿಕೆಯಲ್ಲ. ಸಂಕುಚಿತವಾದ ತಿಳುವಳಿಕೆ. ಇದೂ ಸತ್ಯವಾದುದೇ. ಈ ಜ್ಞಾನಸಂಕೋಚಕ್ಕೆ ಆಣವ, ಮಾಯೀಯ, ಮತ್ತು ಕಾರ್ಮ ಎಂಬ ಮಲತ್ರಯಗಳೇ ಕಾರಣ. ಇವುಗಳೇ ಭೇದಜ್ಞಾನವನ್ನುಂಟುಮಾಡುವುವು. ಚಿತ್, ಆನಂದ, ಇಚ್ಛಾ, ಜ್ಞಾನ, ಕ್ರಿಯಾಶಕ್ತಿಗಳು ಸಂಕೋಚಪಡೆದು ಮೇಲೆ ತಿಳಿಸಿದ ಆಣವ, ಮಾಯೀಯ, ಕಾರ್ಮ – ಎಂಬ ಮೂರು ಮಲರೂಪಗಳನ್ನು ಪಡೆಯುತ್ತವೆ. ಇಲ್ಲಿ ಆಗಿರುವುದು ಸಂಕೋಚ ಮಾತ್ರ, ಪುನಃ ಶಕ್ತಿವಿಕಾಸವಾದರೆ ಸ್ವಸ್ವರೂಪ ಪ್ರಾಪ್ತಿಯಾಗುವುದು. ಅಂದರೆ ಜೀವನದಲ್ಲಿ ಶಿವತ್ವವು ಯಾವಾಗಲೂ ಸಿದ್ಧವಾಗಿದೆ. ಆದರೆ ಅವ್ಯಕ್ತವಾಗಿದೆ. ಉಪಾಯಾನುಷ್ಠಾನದಿಂದ ವಿಕಾಸವನ್ನು ಪಡೆದು ಸ್ವಸ್ವರೂಪ ಜ್ಞಾನವಾದ ಮೋಕ್ಷವನ್ನು ಪಡೆಯಬಹುದು. ಈ ಉಪಾಯಗಳು ಶಾಂಭವ, ಶಾಕ್ತ ಮತ್ತು ಆಣವ ಎಂಬ ಮೂರು ರೂಪವಾಗಿ ಅಧಿಕಾರಿ ಭೇದದಿಂದ ಉಪಯೋಗಿಸಲ್ಪಡಬೇಕೆಂದು ಶಾಸ್ತ್ರಗ್ರಂಥಗಳಲ್ಲಿ ಉಕ್ತವಾಗಿದೆ. ಅಲ್ಲದೆ ಉಪಾಯಗಳ ಸ್ವರೂಪವಿವರಣೆಯೂ ಅಲ್ಲಿ ನಿರೂಪಿತವಾಗಿದೆ. ಅಲ್ಲದೆ ಶಿವನು ಸರ್ವಶಕ್ತನಾಗಿ ಸರ್ವಫಲಪ್ರದನಾಗಿ ನಿಷ್ಪಕ್ಷಪಾತದಿಂದ ತನ್ನ ಪಂಚಕೃತ್ಯಗಳನ್ನೂ ನಡೆಸುತ್ತಿದ್ದರೂ ಜೀವಗಳಿಗೆ ಸುಖದುಃಖಾನುಭವಗಳನ್ನೂ ವಿಕಾಸಾದಿಗಳನ್ನೂ ಅವರ ಮಲ ಮತ್ತು ಕರ್ಮಾದಿಗಳ ಪರಿಮಿತಿಗಳಿಗನುಗುಣವಾಗಿ ಮಾಡುತ್ತಾನೆ. ಆದುದರಿಂದಲೇ ಜೀವರುಗಳ ಸುಖದುಃಖ ಮೋಕ್ಷಾದಿಗಳು ಭಿನ್ನಭಿನ್ನವಾಗಿರುತ್ತವೆ. ಈ ದರ್ಶನದಲ್ಲಿಯೂ 'ಶಕ್ತಿನಿಪಾತ'ಕ್ಕೆ ಪ್ರಧಾನ ಸ್ಥಾನವಿದೆ.

ಈ ಪ್ರತ್ಯಭಿಜ್ಞಾದರ್ಶನದ ಮೂಲ ಪ್ರಕಾಶಕರು ವಸುಗುಪ್ತರೆಂಬುವರು. ಇವರು ಶಿವನಿಂದ ಸ್ವಪ್ನದಲ್ಲಿ ಪ್ರಚೋದಿತರಾಗಿ ತಾವು ವಾಸಮಾಡುತ್ತಿದ್ದ ಮಹಾದೇವ ಗಿರಿಯ ಪಕ್ಕದಲ್ಲಿ ಶಿಲೆಯುಲ್ಲಿ ನಿಕ್ಷಿಪ್ತವಾಗಿದ್ದ ಶಿವಸೂತ್ರಗಳನ್ನು ಉದ್ಧಾರಮಾಡಿ ಕಲ್ಲಟಾದಿ ಶಿಷ್ಯರಿಗೆ ಉಪದೇಶಮಾಡಿದುದಲ್ಲದೆ 'ಸ್ಪಂದಕಾರಿಕೆ'ಗಳನ್ನು ಬರೆದು ಸೂತ್ರಾರ್ಥಗಳನ್ನು ಪ್ರಕಾಶಪಡಿಸಿದರೆಂದು ಪ್ರತೀತಿ. ಇದಕ್ಕನುಗುಣವಾಗಿ ಈಗಲೂ ಮಹಾದೇವ ಗಿರಿಯಲ್ಲಿ ಶಂಕರಪಲ್ (ಶಂಕರೋಪಲ) ಎಂಬ ಹೆಸರಿನಿಂದ ಮಾಡಿದ ಶಿವಸೂತ್ರಗಳನ್ನು ಕೆತ್ತಿದ್ದ ಬಂಡೆಯನ್ನು ತೋರಿ

( 26ನೇ ಪುಟ ನೋಡಿ)

# ಬಲಿ ಚಕ್ರವರ್ತಿ

ಶ್ರೀ ಯಸ್. ನರಸಿಂಹಾಚಾರ್ಯ

ಅಶ್ವತ್ಥಾಮಾ ಬಲಿರ್ವ್ಯಾಸೋ
 ಹನೂಮಾಂಶ್ಚ ವಿಭೀಷಣಃ ।
ಕೃಪಃ ಪರಶುರಾಮಶ್ಚ
 ಸಪ್ತೈತೇ ಚಿರಜೀವಿನಃ ॥

ಚಿರಂಜೀವಿಗಳೆಂದು ಪುರಾಣ ಪ್ರಸಿದ್ಧ ರಾದವರು ಏಳುಮಂದಿ ಮೇಲೆ ಕಾಣಿಸಿರುವವರು. ಬಲಿ ಚಕ್ರವರ್ತಿ ಅಸುರನಾದಾಗ್ಯೂ ಚಿರಂಜೀವಿಯಾದ ಬಗೆ ಬಹಳ ಆಶ್ಚರ್ಯಕರವಾದುದು. ಈ ಮಹಾ ಪುರುಷನ ಪೂಜೆಯನ್ನೂ ಹಬ್ಬವನ್ನೂ ದೀಪಾವಳಿಯಾದ ಮಾರನೇ ದಿನ ಈವತ್ತಿಗೂ ಬಲಿಪಾಡ್ಯಮಿಯೆಂದು ಆಚರಿಸುತ್ತಿದ್ದೇವೆ. ಈತನ ಮಹತ್ವ ಅಮೋಘವಾದುದು.

ಪ್ರಹ್ಲಾದನ ವಂಶಸ್ಥನಾಗಿ ಹುಟ್ಟಿದ ಇವನಿಗೆ ಸದ್ಬುದ್ಧಿ ಯುಂಟಾಗಿ ತಪಸ್ಸನ್ನು ಆಚರಿಸಿ ಬ್ರಹ್ಮ ನಿಂದ ವರವನ್ನು ಪಡೆದನು. ಯುದ್ಧದಲ್ಲಿ ಗಟ್ಟಿ ಪದಾರ್ಥದಿಂದಲೇ ಆಗಲಿ ನೀರಿನಂತಹ ದ್ರವ ಪದಾರ್ಥದಿಂದಲೇ ಆಗಲಿ ತನಗೆ ಮರಣ ಸಂಭವಿಸಬಾರದೆಂಬುದೇ ಅವನು ಪಡೆದ ವರ. (ಈತನ ಮುತ್ತಾತ ಹಿರಣ್ಯಕಶಿಪು ಬ್ರಹ್ಮಸೃಷ್ಟಿ ಯಲ್ಲಿ ಯಾತರಿಂದಲೂ ಮರಣ ಕೂಡದೆಂದು ವರ ಪಡೆದಿದ್ದ.) ಇವನು ಲೋಕ ಕಂಟಕನಾಗಿರ ಲಿಲ್ಲ. ಆದರೆ ತ್ರೈಲೋಕಾಧಿಪತ್ಯವನ್ನು ಸಂಪಾ ದಿಸ ಬೇಕೆಂಬ ಹಂಬಲವಿತ್ತು. ಇವನಿಗೆ ಮಯ ನಿಂದ ನಿರ್ಮಿತವಾದ ವೈಹಾಯಸವೆಂಬ ಮಾಯಾ ವಿಮಾನವಿತ್ತು. ಇದರಿಂದ ಗರ್ವಿಷ್ಠ ನಾಗಿ ಮೇಲಿಂದ ಮೇಲೆ ಸುರಲೋಕಾಧಿಪತ್ಯದ ವ್ಯಾಮೋಹದಿಂದ ಸುರರ ಮೇಲೆ ಯುದ್ಧ ಮಾಡುತ್ತಲೇ ಇದ್ದ.

ದೇವೇಂದ್ರನು ಸುರಲೋಕದ ಅಧಿಪತಿ. ಸಾಮಾನ್ಯವಾಗಿ ವಿನೀತನಾಗಿ ಸಾತ್ತ್ವಿಕ ಬುದ್ಧಿ ಯಿಂದ ಇರತಕ್ಕವನು. ಆದರೆ ಆಗಾಗ ದಾರಿತಪ್ಪಿ ನಡೆದು ಅಹಂಕಾರ ಮದ ಪರವಶನಾಗಿ ಸಂಕಷ್ಟ ಕ್ಕೊಳಗಾಗುವನು. ಒಂದಾನೊಂದು ಸಲ ಇವನು ತನ್ನ ಐರಾವತವೆಂಬ ಮದಗಜದಮೇಲೆ ಕಳೆತು ಠೀವಿಯಿಂದ ಸವಾರಿ ಹೊರಟಿದ್ದ. ಆಗ ದೂರ್ವಾಸ ಮಹರ್ಷಿಗಳು ಆಗಮಿಸಿದರು. ಇವ ನನ್ನು ನೋಡಿ ದೇವರಾಜಗೌರವದಿಂದ ಪ್ರಸಾದ ರೂಪವಾಗಿ ಒಂದು ಸುಗಂಧ ಮಾಲಿಕೆಯನ್ನು ಕೊಟ್ಟರು. ದೇವೇಂದ್ರನ ಕರ್ಮ, ಅವನು ಸ್ವಲ್ಪ ಗರ್ವದಿಂದ ಅದನ್ನು ಸ್ವೀಕರಿಸಿ, ಅವರಿಗೆ ಸರಿ ಯಾದ ಗೌರವವನ್ನೂ ಸೂಚಿಸದೆ, ಆ ಪುಷ್ಪ ಹಾರವನ್ನು ಆನೆಯ ಕುಂಭಸ್ಥಳಕ್ಕೆ ಎಸೆದನು. ಆನೆಯಾದರೋ ಹಾರವನ್ನು ತನ್ನ ಸೊಂಡಿಲಿ ನಿಂದ ಸೆಳೆದುಕೊಂಡು ನೆಲದಮೇಲೆ ಹಾಕಿ ಕಾಲಿ ನಿಂದ ಹೊಸಕಿಹಾಕಿತು. ಋಷಿಗಳಿಗೆ ತುಂಬಾ ಕೋಪ ಬಂದು ಅವನಿಗೆ ಐಶ್ವರ್ಯಹಾನಿಯಾಗ ಲೆಂದು ಶಪಿಸಿ ಹೊರಟುಹೋದರು. ಹೀಗೆ ಶಾಪಗ್ರಸ್ತನಾಗಿದ್ದ ಸಮಯದಲ್ಲಿ ಬಲಿಯು ಅವನ ಮೇಲೆ ಯುದ್ಧಕ್ಕೆ ಬಂದು ಅವನನ್ನು ಸೋಲಿಸಿ ದೇವಲೋಕದಿಂದ ಅವನನ್ನೂ ಇತರ ದೇವತೆ ಗಳನ್ನೂ ಓಡಿಸಿಬಿಟ್ಟನು.

ಇಂದ್ರನು ತನ್ನ ಗುರುಗಳಾದ ಬೃಹಸ್ಪ-ತ್ಯಾಚಾರ್ಯರನ್ನು ಮುಂದೇನು ಮಾಡಬೇಕೆಂದು ಕೇಳಲಾಗಿ ಸ್ವಲ್ಪಕಾಲ ಅಜ್ಞಾತನಾಗಿದ್ದು ಪರಮ ಪುರುಷನ ಸಹಾಯ ಹೊಂದಿ ಮರಳಿ ರಾಜ್ಯ ಹೊಂದುವುದು ಲೇಸೆಂದು ಸಲಹೆಕೊಟ್ಟರು. ಬಲಿ ಯಾದರೋ ಸ್ವರ್ಗಲೋಕವನ್ನು ಗೆದ್ದರೂ ಇಂದ್ರ ಪದವಿಯನ್ನು ಹೊಂದಬೇಕಾದರೆ ನೂರು ಅಶ್ವಮೇಧಯಾಗ ಮಾಡಿ ಶತಕ್ರತುವೆನಿಸಿ ನಂತರ ಆ ಪದವಿಯನ್ನು ಪಡೆಯಬೇಕು. ಇದಕ್ಕಾಗಿ ಶುಕ್ರಾಚಾರ್ಯರ ಸಹಾಯ ಹೊಂದಿ ಅವರ ನೇತೃತ್ವದಲ್ಲಿ ಒಂದರ ಮೇಲೊಂದು ಅಶ್ವಮೇಧ ಯಾಗ ಮಾಡಲು ಆರಂಭಿಸಿದನು.

ಬಲೀಂದ್ರನು ಮಾಡುತ್ತಿದ್ದ ಯಾಗಗಳನ್ನು ತಿಳಿದು ಅವನೆಲ್ಲಿ ಶತಕ್ರತುವಾಗಿಬಿಡುವನೋ ಎಂಬ ಭಯದಿಂದ ದೇವತೆಗಳೆಲ್ಲರೂ ಬ್ರಹ್ಮನ ಸಹಾಯ ದಿಂದ ವಿಷ್ಣುಲೋಕಕ್ಕೆ ಹೋಗಿ ಪ್ರಾರ್ಥಿಸಿ ಕೊಂಡರು.

ಬಲೇಸ್ತು ಯಜಮಾನಸ್ಯ
 ದೇವಾಃ ಸಾಗ್ನಿಪುರೋಗಮಾಃ ।
ಸಮಾಗಮ್ಯ ಸ್ವಯಂ ಚೈವ
 ವಿಷ್ಣುಮೂಚು ರಿಹಾಶ್ರಮೇ ॥
ಬಲಿ ರ್ವೈರೋಚನಿ ರ್ವಿಷ್ಣೋ
 ಯಜತೇ ಯಜ್ಞ ಮುತ್ತಮಂ ।
ಅಸಮಾಪ್ತೇ ಕ್ರತೌ ತಸ್ಮಿನ್
 ಸ್ವಕಾರ್ಯ ಮಭಿಪದ್ಯತಾಂ ॥
ಯೇ ಚೈನ ಮಭಿವರ್ತಂತೇ
 ಯಾಚಿತಾರ ಇತಸ್ತತಃ ।
ಯಚ್ಚ ಯತ್ರ ಯಥಾವಚ್ಚ
 ಸರ್ವಂ ತೇಭ್ಯಃ ಪ್ರಯಚ್ಛತಿ ॥
ಸತ್ತ್ವಂ ಸುರಹಿತಾರ್ಥಾಯ
 ಮಾಯಾಯೋಗ ಮುಪಾಶ್ರಿತಃ ।
ವಾಮನತ್ವಂ ಗತೋ ವಿಷ್ಣೋ
 ಕುರು ಕಲ್ಯಾಣ ಮುತ್ತಮಂ ॥

ಬಲಿಯು ತನ್ನ ಕೊನೆಯ ಯಾಗವನ್ನು ಮುಗಿಸುವುದಕ್ಕೆ ಮೊದಲು ಭಗವಂತನು ಮಾಯೆ ಯಿಂದ ವಾಮನರೂಪಿಯಾಗಿ ಬಲಿಯ ಬಳಿ ಯಾಚಿಸಿ ಅವನಿಂದ ತ್ರೈಲೋಕಾಧಿಪತ್ಯವನ್ನು ಪಡೆದು ಸುರಕಾರ್ಯವನ್ನು ಆಗಮಾಡಿಕೊಡ ಬೇಕೆಂದು ಪ್ರಾರ್ಥಿಸಿದರು. ಭಗವಂತನು ಅವರ ಪ್ರಾರ್ಥನೆಯನ್ನು ಸಲ್ಲಿಸುವುದಾಗಿ ಅಭಿವಚನ ವಿತ್ತು, ಅದಿತಿಯ ಹೊಟ್ಟೆಯಲ್ಲಿ ಮಗುವಾಗಿ ವಾಮನನಾಗಿ ಜನಿಸಿದನು. ಮಗುವು ತೇಜಃ ಪುಂಜವಾಗಿ ಬೆಳೆದನು. ಅವನಿಗೆ ಗರ್ಭಾಷ್ಟಮ ದಲ್ಲಿ ಮುಂಜಿಯಾಯಿತು. ಆ ಉಪನಯನ ಸಮಾ ರಂಭದಲ್ಲಿ ಸೂರ್ಯದೇವನೇ ಕೆಳಕ್ಕಿಳಿದು ಬಂದು ಆ ವಟುವಿಗೆ ಗಾಯತ್ರಿಯನ್ನು ಉಪದೇಶಿಸಿದನು, ಬೃಹಸ್ಪತ್ಯಾಚಾರ್ಯರು ಬ್ರಹ್ಮಸೂತ್ರವನ್ನು ತಂದುಕೊಟ್ಟರು, ಭೂದೇವಿಯು ಕೃಷ್ಣಾಜಿನ ವನ್ನೂ, ಚಂದ್ರನು ದಂಡವನ್ನೂ, ಬ್ರಹ್ಮನು ಕಮಂಡಲವನ್ನೂ, ಕುಬೇರನು ಭಿಕ್ಷಾಪಾತ್ರೆ ಯನ್ನೂ ಬಹುಮಾನವಾಗಿ ಕೊಟ್ಟರು, ಹೀಗೆ ಕಮಂಡಲ ದಂಡ ಅಜಿನ ಯಜ್ಞೋಪವೀತಗಳಿಂದ ಅಲಂಕೃತನಾಗಿ ಜಾಜ್ವಲ್ಯಮಾನನಾಗಿ ತನ್ನ ಮುಂದಿನ ದೇವತಾಕಾರ್ಯಕ್ಕಾಗಿ ವಾಮನನು ಹೊರಟನು. ಆಗ ಬಲಿಯ ಕೊನೇಯಾಗ ಸಮಯ. ಮುಕ್ತಹಸ್ತದಿಂದ ಮನಃಪೂರ್ತಿಯಾಗಿ ಬಲಿಯು ದಾನಮಾಡುತ್ತಿದ್ದಾನೆ. ಆ ಸಮಯಕ್ಕೆ ಬಲಿಯ ಸಭೆಗೆ ವಾಮನಮೂರ್ತಿ ಆಗಮಿಸಿದ. ಆ ಪುಟ್ಟಮೂರ್ತಿ ಸಭೆಗೆ ನಡೆದು ಬರುತ್ತಿದ್ದರೆ ಎಲ್ಲರೂ ಅವನ ಆಕಾರಕ್ಕೂ ವರ್ಚಸ್ಸಿಗೂ ಮನಸೋತು ಆಶ್ಚರ್ಯತುಂಬಿ ಗೌರವದಿಂದ ಧಿಗ್ಗನೆದ್ದು ನಿಂತರು. ಪುಟ್ಟ ವಾಮನನ ಮೋಹಕ ಸೊಗಸು ;

ಪ್ರಬುದ್ಧ ಮುಗ್ಧಾಂಬುಜ ಚಾರು ಲೋಚನಂ
 ಸವಿಭ್ರಮ ಭ್ರೂಲತಮುಜ್ಜ್ವಲಾಧರಂ ।
ಶುಚಿಸ್ಮಿತಂ ಕೋಮಲಗಂಡಮುನ್ನಸಂ
 ಲಲಾಟಪರ್ಯಂತ ವಿಲಂಬಿತಾಲಕಂ ॥

ಬಲಿಚಕ್ರವರ್ತಿಯು ವಾಮನರೂಪಿನಿಂದ ಸೆಳೆಯಲ್ಪಟ್ಟವನಾಗಿ, ಪ್ರತ್ಯುತ್ಥಾನಮಾಡಿ, ಸಭೆಗೆ

ಕರೆತಂದು, ಉಚಿತಾಸನದಲ್ಲಿ ಕುಳ್ಳಿರಿಸಿ, ಅರ್ಘ್ಯ ಪಾದ್ಯಾಚಮನೀಯಗಳನ್ನು ಸಮರ್ಪಿಸಿ, ಮಧು ಪರ್ಕದಿಂದ ಅವನನ್ನು ಸಂತೋಷಪಡಿಸಿ, ಆತನ ಬಳಿನಿಂತು ವಿನೀತನಾಗಿ ಅವನ ಅಭೀಷ್ಟವೇನೆಂದು ತಿಳಿಯಲು ಉತ್ಸುಕನಾದ, ಆ ಸಭೆಯಲ್ಲಿ ವಾಮನನ ದರ್ಶನದಿಂದ ಎಲ್ಲರಿಗೂ ಸಂತೊಷ, ಆಶ್ಚರ್ಯ, ಕುತೂಹಲ. ಆದರೆ ಶುಕ್ರಾಚಾರ್ಯ ರಿಗೆ ಮಾತ್ರ ದಿಗಿಲು, ತಾನು ಮಾಡಿಸುತ್ತಿರುವ ಈ ಕೊನೇ ಯಾಗಕ್ಕೆ ಈ ಮಾಯಾವೀ ವಟು ಏನು ಅಡ್ಡಿಯುಂಟು ಮಾಡುವನೋ ಎಂದು ಭೀತಿ. ಈ ಕಾರಣದಿಂದ ಬಲಿಯನ್ನು ಕರೆದು ಈ ಮಾಯಾವಿ ವಟು ಕೇಳಿದ ಭಿಕ್ಷೆಯನ್ನು ಕೊಡಬಾರದೆಂದು ಹೇಳಿದ. ಆ ವಟುವು ಬೇರೆ ಯಾರೂ ಅಲ್ಲದೆ ಶ್ರೀಹರಿಯೇ ಎಂದೂ, ಚಕ್ರ ವರ್ತಿಯನ್ನು ಯಾಗದಿಂದ ವಂಚಿಸಿ ಅವನು ಆಸೆ ಪಟ್ಟಿರುವ ಇಂದ್ರಪದವಿಯಿಂದ ತಪ್ಪಿಸುವ ನೆಂದೂ ಎಚ್ಚರಿಕೆಯಿತ್ತ. ಆದರೇನು, "ತೇನ ವಿನಾ ತೃಣಮಪಿ ನಚಲತಿ". ಅವನು ಪ್ರೇರಕ, ಉಳಿದವರೆಲ್ಲರೂ ಅವನ ಪ್ರೇರಣೆಯಂತೆ ಮಾತ್ರ ನಡೆಯಬಲ್ಲವರು. ಸ್ವಕರ್ತೃತ್ವವೆಂಬುದು ಜೀವಿ ಗಳಿಗೆ ಇಲ್ಲ. ಅವಿದ್ಯೆಯಿಂದ ಆವೃತನಾಗಿ ಭಗವಂತನು ಏನು ಮಾಡಿಸುತ್ತಾನೋ ಅದನ್ನು ತಾನೇ ಮಾಡುತ್ತಿರುವುದಾಗಿ ಭಾವಿಸಿ, ಮಾಯೆಗೆ ಒಳಗಾಗಿ, ಕರ್ಮಪಾಶ ಬಂಧಿತನಾಗುತ್ತಾನೆ. ಅದಕ್ಕೆ ಬದಲು ಅವನ ಪ್ರೇರಣೆಯನ್ನು ತಿಳಿದು ಅದು ಅವನ ಕೃತ್ಯವೆಂದು ತಿಳಿದು ಅವನಿಗೇ ಸಮರ್ಪಿಸಿಬಿಟ್ಟರೆ ಈ ಸಾತ್ವಿಕ ತ್ಯಾಗದಿಂದ ಇವನು ವಿಜ್ಞಾನಿಯಾಗಿ ಕರ್ಮಪಾಶ ವಿಮುಕ್ತ ನಾಗಿ ಪರಮಾತ್ಮನಿಗೆ ಪ್ರಿಯನಾಗುತ್ತಾನೆ. ಈ ಸಾತ್ವಿಕ ತ್ಯಾಗದ ಬುದ್ಧಿಯಿಲ್ಲದೆ ಮಾಡುವುದೆಲ್ಲ ಸಂಸಾರಬಂಧನ, ಬಲಿಯು ಶುಕ್ರಾಚಾರ್ಯರ ಬುದ್ಧಿವಾದವನ್ನು ಮನಸ್ಸಿಗೆ ತೆಗೆದುಕೊಳ್ಳಲಿಲ್ಲ. ಕೊನೇ ಯಾಗವಾದ್ದರಿಂದ ಕೇಳಿದವರಿಗೆ ಕೇಳಿದ್ದೆಲ್ಲಾ ಕೊಡುವುದು ಅವನ ಸತ್ಯಸಂಕಲ್ಪ. ವಾಮನನ ಅಭೀಷ್ಟವೇನೆಂದು ಬಲಿಯು ಪ್ರಾರ್ಥಿಸಲಾಗಿ ಆ ದಿವ್ಯಸಭೆಯಲ್ಲಿ ಕುಳ್ಳಾಗಿ ನಿಂತು ಮೋಟುಕಾಲುಗಳಿಂದ ಕಂಗೊಳಿಸಿ ತನಗೆ ತನ್ನ ಹೆಜ್ಜೆಯ ಮೂರು ಅಳತೆ ಭೂಮಿ ಬೇಕೆಂದೂ, ಬೇರೆ ಯಾವ ಐಶ್ವರ್ಯವೂ ತನಗೆ ಬೇಡವೆಂದೂ ಆ ವಾಮನ ಮೂರ್ತಿಯು ಚಕ್ರವರ್ತಿಯನ್ನು ಬೇಡಿದನು. ಯಾಚನೆಯು ತುಂಬಾ ಹಾಸ್ಯಾಸ್ಪದವೂ ಅಪ್ರಯೋಜಕವೂ ಆಗಿದ್ದರೂ ಆ ಚಕ್ರವರ್ತಿಯು ಇತರ ಆಮಿಷಗಳನ್ನು ಅಂಗೀಕರಿಸದೆ ತಾನು ಕೇಳಿದ್ದೇ ಬೇಕೆಂದು ಒತ್ತಾಯಿಸಿದನು. ಚಕ್ರವರ್ತಿಯ ಧರ್ಮಪತ್ನಿ ವಿಂಧ್ಯಾವಳಿಯು ಗಿಂಡಿಯಲ್ಲಿ ನೀರು ಬಿಡಲಾಗಿ ಮೂರು ಹೆಜ್ಜೆ ಭೂಮಿಯನ್ನು ಆ ಅಲೌಕಿಕಮೂರ್ತಿಗೆ ರಾಜನು ಧಾರೆಯೆರೆದನು. ಗಿಂಡಿಯ ನೀರು ವಾಮನ ಮೂರ್ತಿಯ ಕೈಗೆ ಬೀಳುತ್ತಿದ್ದಂತೆಯೇ ಚಕ್ರವರ್ತಿಯ ಪುಣ್ಯವೋ ಎಂಬಂತೆ ಅವನ ಆಕಾರವು ಅದ್ಭುತ ರೀತಿಯಲ್ಲಿ ಬೆಳೆಯಲು ಆರಂಭ ವಾಯಿತು. "ಪಾತಾಳ ಅವನ ಅಂಗಾಲಿನಲ್ಲಿ, ಭೂಮಿ ಹೆಜ್ಜೆಯಲ್ಲಿ, ವಾಯುಮಂಡಲ ತೊಡೆಯಲ್ಲಿ, ನಾಭಿಯಲ್ಲಿ ಅಂತರಿಕ್ಷ, ಎದೆಯಲ್ಲಿ ನಕ್ಷತ್ರ ಮಂಡಲ – ಶಿರಸ್ಸು ಎಲ್ಲಿಯೋ – ಸಕಲಲೋಕ ಗಳನ್ನೂ ಆವರಿಸಿಕೊಂಡು ಬೆಳೆದ ಆ ಭಯಂಕರಾಕೃತಿಯನ್ನು ಕಂಡು ದೇವದಾನವರು ಭಯದಿಂದ ಭ್ರಾಂತರಾಗಿಹೋದರು." "ಚರಣಂ ಪವಿತ್ರಂ ವಿತತಂ ಪುರಾಣಂ", ಒಂದೊಂದು ಹೆಜ್ಜೆಯಿಂದ ಭೂಮಿಯನ್ನೂ ಸ್ವರ್ಗವನ್ನೂ ಅಳೆದು, ಮೂರನೆಯ ಹೆಜ್ಜೆಗಾಗಿ ವಾಮನನು ಬಲಿಯನ್ನು ಕೇಳಿದನು. ಬಲಿಗೂ ವಿಂಧ್ಯಾವಳಿಗೂ ಶ್ರೀಹರಿಯ ಲೀಲೆ ಅದ್ಭುತವೋ ಅದ್ಭುತವಾಯಿತು. ಪರಮಾಶ್ಚರ್ಯದಿಂದ ಕೂಡಿ ಬಲಿಯು ಮೂರನೆ ಅಳತೆ ಗಾಗಿ ತನ್ನ ತಲೆಯನ್ನು ತೋರಿಸಿದನು. ಬಲಿಯ ಭಾಗ್ಯವನ್ನು ನೋಡಿ ಋಷಿಗಳೂ ದೇವದೇವತೆಗಳೂ ಈ ರೀತಿ ಹಂಬಲಿಸಿದರು.

ಕದಾ ಪುನಶ್ಶಂಖರಥಾಂಗ ಕಲ್ಪಕ
ಧ್ವಜಾರವಿಂದಾಂಕುಶ ವಜ್ರಲಾಂಛನಂ।
ತ್ರಿವಿಕ್ರಮ ತ್ವಚ್ಚರಣಾಂಬುಜ ದ್ವಯಂ
ಮದೀಯಮೂರ್ಧಾನ ಮಲಂಕರಿಷ್ಯತಿ ॥

ಅಲ್ಲಿ ನೆರೆದಿದ್ದ ಮಹನೀಯರೆಲ್ಲರೂ ಆ ವಿರಾಟ್ ಸ್ವರೂಪದ ದರ್ಶನದಿಂದ ಆನಂದಪುಳಕಿತರಾದರು. ಎಲ್ಲರೂ ಭಗವಂತನ ಎಲ್ಲೆಯಿಲ್ಲದ ಮಹಿಮೆಯನ್ನು

( 25ನೇ ಪುಟ ನೋಡಿ )

ಯುವವಾಣಿ

## ದಕ್ಷಿಣ ಭಾರತದಲ್ಲಿ

# ಹಿಂದೂ ಧರ್ಮ ಪ್ರಸಾರ

ಕೃಷ್ಣಾ–ತುಂಗಭದ್ರಾ ನದಿಯ ದಕ್ಷಿಣಕ್ಕೆ ಇರುವ ಪ್ರದೇಶವು ಪಂಚದ್ರಾವಿಡನಾಡೆಂದು ಕರೆಯಲ್ಪಡುವ ದಕ್ಷಿಣ ಭಾರತ. ಉತ್ತರ ಭಾರತದಿಂದ ಬಂದ ವೈದಿಕಮತಕ್ಕೆ ಈ ಪ್ರದೇಶದಲ್ಲಿ ಹೊಸ ಕಳೆ ಉಂಟಾಯಿತು. ಈ ನಾಡಿನಲ್ಲಿ ಇಲ್ಲಿನ ದ್ರಾವಿಡ ಸಂಪ್ರದಾಯವನ್ನು ರೂಢಿಸಿಕೊಂಡು ವೈದಿಕ ಧರ್ಮವು ಶ್ರೀಮಂತವಾಯಿತು. ಇದು ಭಾರತದ ಧಾರ್ಮಿಕ ಇತಿಹಾಸದಲ್ಲಿ ನಡೆದ ಒಂದು ಅಪೂರ್ವ ಘಟನೆ.

ಮರ, ಪ್ರಾಣಿ, ದೈವ, ಇತ್ಯಾದಿಗಳನ್ನು ಪೂಜಿಸುತಿದ್ದ ದಕ್ಷಿಣ ಭಾರತೀಯರು ಕ್ರಿ. ಪೂ. 1000ದಲ್ಲಿ ಉತ್ತರಭಾರತದ ಆರ್ಯರಸಂಪರ್ಕಕ್ಕೆ ಬಂದರು. ಇವರ ಧಾರ್ಮಿಕ ಕ್ರಮ ಮತ್ತು ತತ್ತ್ವಗಳನ್ನು ದಕ್ಷಿಣ ಭಾರತೀಯರು ಮನನ ಮಾಡಿಕೊಂಡರು. ಇದರಿಂದಾಗಿ ಆರ್ಯ ಮತ್ತು ದ್ರಾವಿಡರ ಧಾರ್ಮಿಕ ಪದ್ಧತಿಗಳು ಪರಸ್ಪರ ಪ್ರಭಾವಕ್ಕೆ ಒಳಗಾದವು. ಇದರ ಪ್ರತಿಕ್ರಿಯೆಯೇ ಆಧುನಿಕ ಹಿಂದೂ ಧರ್ಮ.

ಕ್ರಿ.ಪೂ. 3ನೇ ಶತಮಾನದಿಂದ ಕ್ರಿ. ಶ. ಆರನೇ ಶತಮಾನದ ವರೆಗೆ ಬೌದ್ಧ ಮತ್ತು ಜೈನ ಧರ್ಮಗಳು ದಕ್ಷಿಣ ಭಾರತದಲ್ಲಿ ಪ್ರಬಲವಾದ ಧರ್ಮಗಳಾಗಿ ಬೆಳೆದು ಬಂದವು. ಆಂಧ್ರ ಪ್ರದೇಶದ ನಾಗಾರ್ಜುನ, ಗೋಳಿ ಘಂಟಶಾಲಾ, ಅಮರಾವತಿ, ತಮಿಳುನಾಡಿನ ಕಾಂಚೀ, ಕೇರಳದ ಶ್ರೀ ಮೂಲವಾಸ ಮತ್ತು ಕರ್ನಾಟಕದ ಕೋಳಿವಾಡ ಮತ್ತು ಸನ್ನತಿ ಮೊದಲಾದ ಸ್ಥಳಗಳು ಬೌದ್ಧ ಧರ್ಮದ ಪ್ರಬಲ ಕೇಂದ್ರಗಳಾದುವು. ಆದರೆ ಈ ಧರ್ಮದ ಚಟುವಟಿಕೆಯು ಈ ಕ್ಷೇತ್ರಗಳಿಗಷ್ಟೇ ಸೀಮಿತವಾಗಿತ್ತು.

ಜೈನಮತ ರಾಜಾಶ್ರಯ ಹೊಂದಿ ದಕ್ಷಿಣ ಭಾರತದಲ್ಲಿ ಬಲಗೊಂಡಿತು. ಈ ಮತದ ಪ್ರಸಾರವು ದಕ್ಷಿಣ ಭಾರತದ ಭಾಷಾ ಅಭಿವೃದ್ಧಿಗೂ ಸಹಕಾರಿಯಾಯಿತು. ಆರನೇ ಶತಮಾನದ ಆದಿಯಲ್ಲಿ ದಕ್ಷಿಣಭಾರತದಲ್ಲಿ ಈ ಮತಕ್ಕೆ ಸಬಲ ಪ್ರತಿಕ್ರಿಯೆ ತೋರಿದವರು ಶೈವ ವೈಷ್ಣವರೆನಿಸಿದ ನಾಯನ ಮಾರರು ಮತ್ತು ಆಳ್ವಾರರು. ಇವರು ವಿವಿಧ ಜಾತಿಗಳಿಂದಲೂ ಅಂತಸ್ತುಗಳಿಂದಲೂ ಬಂದವರು. ಇವರು ಸಾಧಿಸಿದ ಮುಖ್ಯಕೆಲಸವೆಂದರೆ ಉದ್ರೇಕಪೂರಿತ ಭಕ್ತಿಪಂಥ ಪ್ರಚಾರ. ಇದರಿಂದಾಗಿ ಬೌದ್ಧ ಮತ್ತು ಜೈನ ಧರ್ಮಗಳ ಆಡಿಪಾಯ ಸಡಿಲಾಯಿತು. ಇಷ್ಟಲ್ಲದೇ ಶೈವ ಮತ್ತು ವೈಷ್ಣವ ಪಂಥಗಳು ಪರಸ್ಪರ ಪ್ರತಿಸ್ಪರ್ಧಿಗಳಾಗಿ ಬೆಳೆದುಬಂದು ದಕ್ಷಿಣಭಾರತದ ಧಾರ್ಮಿಕ ಕಲೆಯಲ್ಲಿ ಒಂದು ಹೊಸ ತಿರುವನ್ನುಂಟುಮಾಡಿದವು.




ಹಿಂದೂ ಧರ್ಮಕ್ಕೆ ಸುಸಜ್ಜಿತ ಸುಸಂಘಟನೆ ತಂದವರು ಆಚಾರ್ಯತ್ರಯರು. ಇವರು ವೇದಾಂತವನ್ನು ಪೋಷಿಸಿ ವಿಸ್ತರಿಸಿ ಬೆಳೆಸಿದರು. ಇವರ ಕಾರ್ಯಕ್ಷೇತ್ರವು ಸಮಗ್ರಭಾರತ ವರ್ಷವಾಗಿತ್ತು. ದೇಶದ ಮೂಲೆ ಮೂಲೆಗಳಲ್ಲಿದ್ದ ವಿದ್ವಾಂಸರೊಡನೆ ಚರ್ಚಿಸಿ ತಮ್ಮದೇ ಆದ ತತ್ತ್ವಗಳನ್ನು ಪ್ರತಿಪಾದಿಸಿದರು. ಈ ತತ್ತ್ವಗಳನ್ನು ಮುಂದುವರಿಸಿಕೊಂಡು ಬರಲು ದೇಶದ ಮೂಲೆ ಮೂಲೆಗಳಲ್ಲಿ ಮಠಗಳನ್ನು ಸ್ಥಾಪಿಸಿದರು.

ಕಾಲಡಿಯಲ್ಲಿ ಹುಟ್ಟಿದ ಶಂಕರಾಚಾರ್ಯರು ಆಲೋಚನಾಪರತೆಯಲ್ಲಿ ಅದ್ವಿತೀಯರು. ಇವರು ಸಮಗ್ರ ಭಾರತದಲ್ಲಷ್ಟೇ ಸಂಚರಿಸಿದರಲ್ಲದೇ ಸಾಗರೋತ್ತರವಾದ ಕಾಂಬೋಡಿಯಾಕ್ಕೂ ಹೋಗಿದ್ದರೆಂದು ಪ್ರತೀತಿ ಇದೆ. ನಾಸ್ತಿಕವಾದವನ್ನು ಪ್ರತಿಪಾದಿಸುತ್ತಿದ್ದ ಜೈನ ಮತ್ತು ಬೌದ್ಧ ಧರ್ಮಗಳನ್ನು ಇವರು ಖಂಡಿಸಿದರು. ಇದರಿಂದ ಆ ಮತಗಳ ಪ್ರಾಬಲ್ಯ ಇಳಿಮುಖವಾಯಿತು.

**ಡಾ॥ ಕೆ. ಜಿ. ವಸಂತಮಾಧವ**

ಪ್ರಚಲಿತ ಹಿಂದೂಗಳಲ್ಲಿರುವ ಸಂಕುಚಿತ ಮತ್ತು ಅಸಂಬದ್ಧ ದೇವತಾಪೂಜಾಪದ್ಧತಿಗಳನ್ನು ಉಗ್ರವಾಗಿ ವಿರೋಧಿಸಿ ಶಿವ, ವಿಷ್ಣು, ಶಕ್ತಿ, ಗಣೇಶ, ಸೂರ್ಯ ಮತ್ತು ಕುಮಾರ ದೇವತೆಗಳ ಸಮುದಾಯ ಪೂಜಾಕ್ರಮವನ್ನು ಬೋಧಿಸಿದರು. ಇದರಿಂದ ಹಿಂದೂಗಳಲ್ಲಿ ಮತೀಯ ಸಾಮರಸ್ಯ ಬೆಳೆದು ಬರಲು ಕಾರಣವಾಯಿತು. ಧಾರ್ಮಿಕ ಸಮನ್ವಯಕ್ಕಾಗಿ ಶ್ರಮಿಸಿದ ಶಂಕರಾಚಾರ್ಯರನ್ನು ಜನ ಷಣ್ಮತಸ್ಥಾಪನಾಚಾರ್ಯರೆಂದು ಕರೆದರು. ಭಾರತದಲ್ಲಿರುವ ಪ್ರಮುಖ ದೇವಾಲಯ ಮತ್ತು ತೀರ್ಥಸ್ಥಾನಗಳಿಗೂ ಭೇಟಿಕೊಟ್ಟ ಶಂಕರರು, ಎಲ್ಲೆಲ್ಲಿ ಅಗತ್ಯವೋ ಅಲ್ಲೆಲ್ಲಾ ಪವಿತ್ರತೆಯನ್ನುಂಟುಮಾಡಿದರು. ಪೂಜಾಕ್ರಮಗಳಲ್ಲಿ ತತ್ತ್ವಗಳನ್ನು ತಿದ್ದಿದರು. ಪ್ರಾಣಿಗಳನ್ನು ಹಿಂಸೆಮಾಡಿ ಬಲಿಕೊಡುತ್ತಿದ್ದ ಸ್ಥಳಗಳಲ್ಲಿ ಅದನ್ನು ನಿಲ್ಲಿಸಿದರು. ದೇವತೆಗಳ ಉಗ್ರಸ್ವರೂಪವನ್ನು ಸೌಮ್ಯಸ್ವರೂಪವನ್ನಾಗಿ ಮಾರ್ಪಡಿಸಿದರು. ಶಾಕ್ತಪಂಥೀಯ ದೇವಾಲಯಗಳಲ್ಲಿ ನಡೆದು ಬರುತ್ತಿದ್ದ ದೇವತಾಪೂಜಾಪದ್ಧತಿಗಳನ್ನು ಸುಧಾರಣೆಮಾಡಿ, ಉಗ್ರದೇವತೆಯನ್ನು ಸಹಜವಾಗಿ ಕರುಣಾಶಾಲಿನಿಯಾದ ವಿಶ್ವಮಾತೆಯನ್ನಾಗಿ ಮಾಡಿದರು. ಅನೇಕ ದೇವಾಲಯ



ಗಳಲ್ಲಿ ಶ್ರೀ ಚಕ್ರವನ್ನು ಸ್ಥಾಪಿಸಿ, ಆ ದೇವಾಲಯದ ದೇವತೆಗಳನ್ನು ವಿಶ್ವಮಾತೆಯರನ್ನಾಗಿ ಮಾಡಿದ ಕೀರ್ತಿ ಶಂಕರಾಚಾರ್ಯರಿಗೆ ಸಲ್ಲುತ್ತದೆ. ಅಂತಹ ದೇವಾಲಯಗಳಲ್ಲಿ ಕರ್ನಾಟಕದಲ್ಲಿರುವ ಕೊಲ್ಲೂರು, ತಮಿಳುನಾಡಿನ ತಿರುವೋರಿ, ಮಧುರೆ ಮೀನಾಕ್ಷಿ, ಕಂಚಿ ಕಾಮಾಕ್ಷಿ - ಮುಖ್ಯವಾದವುಗಳು ಬದರಿ, ದ್ವಾರಕಾ, ಪುರಿ, ಶೃಂಗೇರಿ ಮತ್ತು ಕಂಚಿಗಳಲ್ಲಿ ಶಂಕರರು ಮಠಗಳನ್ನು ಸ್ಥಾಪಿಸಿದರು. ಈ ಮಠಗಳು ಇವರ ದಾರ್ಶನಿಕ ಸಿದ್ಧಾಂತಗಳನ್ನು ಬೆಳೆಸಿ, ಉಳಿಸಿಕೊಂಡು ಬಂದವು. ಇದರೊಂದಿಗೆ ಈ ಮಠಗಳು ಭಾರತದ ಸಾಂಸ್ಕೃತಿಕ ಐಕ್ಯತೆಯನ್ನು ರಕ್ಷಿಸಿಕೊಂಡು ಬಂದವು.

ಶಂಕರರ ದಾರ್ಶನಿಕ ಸಿದ್ಧಾಂತ ಅದ್ವೈತ. ಇದರ ಪ್ರಕಾರ ಬ್ರಹ್ಮನೇ ಸತ್ಯ, ಸ್ವಯಂ ವೈಶಿಷ್ಟ್ಯಗಳಿಲ್ಲದ ನಿರ್ಗುಣ, ನಿರಾಕಾರ ಮತ್ತು ಪ್ರಕಾಶಕ. ಅವನನ್ನು ಬಿಟ್ಟರೆ ಉಳಿದುದೆಲ್ಲಾ ಮಾಯೆ. ಈ ಮಾಯೆಯನ್ನು ದಾಟಲು ಬೇಕಾಗಿರುವುದು ಜ್ಞಾನ. ಶಂಕರಾಚಾರ್ಯರು ಬ್ರಹ್ಮತ್ವವನ್ನು ಪಡೆಯಲು ಜ್ಞಾನಮಾರ್ಗವನ್ನು ಪ್ರತಿಪಾದಿಸಿದರೂ ಧಾರ್ಮಿಕ ಮಾರ್ಗದಲ್ಲಿ ಭಕ್ತಿಮಾರ್ಗವನ್ನು ಕಡೆಗಣಿಸಲಿಲ್ಲ. ಅಪ್ರತಿಮ ವಿದ್ವಾಂಸರಾದ ಶಂಕರಾಚಾರ್ಯರು ಬ್ರಹ್ಮಸೂತ್ರ, ಉಪನಿಷತ್ತು ಮತ್ತು ಭಗವದ್ಗೀತೆಗಳ ಮೇಲೆ ವ್ಯಾಖ್ಯಾನ ಬರೆದು ವೇದಾಂತದ ದಾರ್ಶನಿಕ ಘನತೆಯನ್ನು ಏರಿಸಿದರು. ಇಷ್ಟಲ್ಲದೇ ವಿವೇಕ ಚೂಡಾಮಣಿ, ಸೌಂದರ್ಯಲಹರಿ ಇತ್ಯಾದಿಗಳೂ ಇವರ ಅಮರ ಕೃತಿಗಳಾಗಿವೆ. ಅನೇಕ ಸ್ತೋತ್ರಗಳನ್ನೂ ಶಂಕರರು ರಚಿಸಿದರು. ಇವರ ಗ್ರಂಥ ಮತ್ತು ಕೃತಿಗಳಲ್ಲಿ ಆಳವಾದ ವಿಚಾರವೂ ಪ್ರಸನ್ನವಾದ ಪದಪುಂಜಗಳೂ ಕಂಡು ಬರುತ್ತವೆ. ಇವರ ಕೃತಿಗಳ ಶೈಲಿ ಆಳ ಮತ್ತು ಗಂಭೀರ. ಆಲೋಚನೆ ಹಾಗೂ ಪ್ರತಿಪಾದನೆ ಮಾಡುವುದಕ್ಕೆ ಶಂಕರರು ಮೇಲ್ಪಂಕ್ತಿಯನ್ನು ಹಾಕಿಕೊಟ್ಟರು.

ರಾಮಾನುಜಾಚಾರ್ಯರು ವೈಷ್ಣವ ಸಿದ್ಧಾಂತ ಪ್ರವರ್ತಕರು ಮತ್ತು ಪ್ರಥಮವಾಗಿ ಶಂಕರರ ಅದ್ವೈತವನ್ನು ಪ್ರಶ್ನಿಸಿದರು. ಸಂಸ್ಕೃತ ವೇದಾಂತ ಮತ್ತ ಆಳ್ವಾರರ ಸೂಕ್ತಿಗಳನ್ನೊಳಗೊಂಡ ದ್ರಾವಿಡ ವೇದಾಂತಗಳಲ್ಲಿ ಸಮರಸವಿದೆ ಎಂದು ರಾಮಾನುಜಾಚಾರ್ಯರು ಪ್ರತಿಪಾದಿಸಿದ್ದರಿಂದ ಇವರಿಗೆ ಉಭಯ ವೇದಾಂತ ಪ್ರವರ್ತಕರೆಂದು ಹೆಸರು ಬಂತು. ಭಕ್ತಿಮಾರ್ಗಕ್ಕೆ ಸಾಕಷ್ಟು ಅವಕಾಶವನ್ನು ಶಂಕರಾಚಾರ್ಯರು ಕೊಡಲಿಲ್ಲವೆಂದು ತಿಳಿದು ರಾಮಾನುಜಾಚಾರ್ಯರು ಅದ್ವೈತವನ್ನು ವಿರೋಧಿಸಿದರು. ಕರ್ನಾಟಕ, ಆಂಧ್ರ ಮತ್ತು ತಮಿಳುನಾಡಿನಲ್ಲಿ ವೈಷ್ಣವ ಸಂಪ್ರದಾಯ ಬೆಳೆಯಲು ಆಚಾರ್ಯರು ಶ್ರಮಿಸಿದ್ದನ್ನು ಮರೆಯಲಾಗದು. ಕರ್ನಾಟಕದ ತೊಂಡನೂರು, ಮೇಲು ಕೋಟೆ ಮತ್ತು ಬೇಲೂರಿನ ಶಿಲ್ಪ ಸೌಂದರ್ಯದಿಂದ ಕೂಡಿದ ದೇವಾಲಯಗಳ ರಚನೆಗೆ ರಾಮಾನುಜಾಚಾರ್ಯರು ಸ್ಫೂರ್ತಿಯಾಗಿದ್ದರು. ಶ್ರೀ ವೆಂಕಟೇಶ್ವರ ಇತಿಹಾಸ ಮಾಲದಲ್ಲಿ ತಿಳಿಸಿದಂತೆ ರಾಮಾನುಜರು ತಿರುಪತಿ ದೇವಾಲಯದ ಪೂಜಾ ವಿಧಾನಗಳಲ್ಲಿ ಹಲವಾರು ಸುಧಾರಣೆಗಳನ್ನು ತಂದರು. ಅದೇ ಪದ್ಧತಿ ಈಗಲೂ ಅಲ್ಲಿ ನಡೆಯುತ್ತಿದೆ. ಇವರ ದಾರ್ಶನಿಕ ಸಿದ್ಧಾಂತವು ವಿಶಿಷ್ಟಾದ್ವೈತವೆಂದೆನಿಸಿದೆ. ಇದನ್ನು ಉಪನಿಷತ್ತು, ಭಗವದ್ಗೀತೆ ಮತ್ತು ಬ್ರಹ್ಮಸೂತ್ರಗಳ ಆಧಾರದ ಮೇಲೆ ರೂಪಿಸಿದರು. ಅಲ್ಲದೆ ವೈಷ್ಣವ ಆಳ್ವಾರರಿಂದ ಸ್ಫೂರ್ತಿ ಪಡೆದಿದ್ದರು. ಇವರ ತತ್ತ್ವವು "ದೇವರು ಸತ್ಯ, ಸಗುಣ, ಪರಮಾತ್ಮನೇ ಲಕ್ಷ್ಮಿಯನ್ನೊಳಗೊಂಡ ನಾರಾಯಣ". ಶ್ರೀಲಕ್ಷ್ಮಿಯೊಂದಿಗೆ ವಿಷ್ಣುವನ್ನೂ ಪೂಜಿಸಬೇಕೆಂದು ಆಚಾರ್ಯರು ಬೋಧಿಸಿದ್ದರಿಂದ ಇವರ ಪಂಥ 'ಶ್ರೀವೈಷ್ಣವ' ಎಂದು ಕರೆಯಲ್ಪಟ್ಟಿತು. ಆಚಾರ್ಯರು ಕರ್ಮಯೋಗ ಮತ್ತು ಜ್ಞಾನ ಮಾರ್ಗಗಳೆರಡೂ ಭಕ್ತಿಗೆ ಅಗತ್ಯವೆಂದು ಪ್ರತಿಪಾದಿಸಿದ್ದಾರೆ. ಈ ಭಕ್ತಿಮಾರ್ಗಕ್ಕೆ ಶ್ರೀರಾಮಾನುಜರು ಈ ಎರಡು ಅಂಶಗಳನ್ನು ಸೇರಿಸಿದರು ಪ್ರಪತ್ತಿ – ಈಶ್ವರನಲ್ಲಿ ಶರಣುಹೋಗುವುದು, ಆಚಾರ್ಯಭಿಮಾನಯೋಗ–ಬೋಧಕನ ಪೂರ್ಣ ಅಧೀನನಾಗಿರುವುದು. ಭಕ್ತಿಮಾರ್ಗ ಮಾನವರಿಗೆಲ್ಲಾ ಆಚರಿಸಲು ಸೂಕ್ತವಾದದ್ದು. ಇದಕ್ಕೆ ಬೇಕಾಗಿರುವುದು ಆತ್ಮ ಶುಚಿ, ಏಕಾಗ್ರತೆ ಮತ್ತು ದೇವರಲ್ಲಿ ಅನನ್ಯ ಭಕ್ತಿ. ಈ ಭಕ್ತಿಯನ್ನು ಪಂಚಮ ಮತ್ತು ಬ್ರಾಹ್ಮಣೇತರರಲ್ಲಿ ಪ್ರಚಾರ ಮಾಡಿದವರಲ್ಲಿ ಇವರೇ ಮೊದಲಿಗರು. ಇದರಿಂದಾಗಿ ಸಕಲ ಜಾತಿಗಳು ಹಿಂದೂ ಧರ್ಮದಡಿಯಲ್ಲಿ ಸೇರುವಂತಾಯಿತು. ಇದರ ಯಶಸ್ಸು ರಾಮಾನುಜರಿಗೆ ಸಲ್ಲುತ್ತದೆ. ಇವರೇ ಮುಂದೆ ನಿಂತು ಅನೇಕ ದೇವಾಲಯಗಳಲ್ಲಿ ವರ್ಷದ ಕೆಲವು ದಿವಸಗಳಲ್ಲಿ ಪ್ರವೇಶಾವಕಾಶವನ್ನೊದಗಿಸಿ, ಭಗವಂತನ ಭಕ್ತರೆಲ್ಲಾ ಸಮಾನರೆಂದು ಉಪದೇಶಿಸಿದರು.

ವೇದಾಂತಸಾರ, ವೇದಾರ್ಥ ಸಂಗ್ರಹ, ವೇದಾಂತ ದೀಪ, ಶ್ರೀ ಭಾಷ್ಯ, ವೈಕುಂಠ ಗದ್ಯ ಶ್ರೀವೈಷ್ಣವಪೂಜಾವಿಧಾನ ಇವು – ರಾಮಾನುಜರ ಮುಖ್ಯಕೃತಿಗಳು. ವೈಷ್ಣವ ಆಳ್ವಾರರ ಮೇಲೆ ಕೀರ್ತನೆ ಬರೆದು, ದಿವ್ಯ ಪ್ರಬಂಧಗಳನ್ನು ಐದನೇ ವೇದವೆಂದು ಕರೆದರು.

ರಾಮಾನುಜರ ವಿಶಿಷ್ಟಾದ್ವೈತಕ್ಕೆ ಸಂಬಂಧಪಟ್ಟಂತೆ, ಅದರಿಂದ ಪ್ರತ್ಯೇಕ ವೆನಿಸಿದ ಇನ್ನೊಂದು ರೀತಿಯ ವೈಷ್ಣವ ಪಂಥವನ್ನು ನಿಂಬಾರ್ಕ ಎಂಬ ಸಂತರು ಪ್ರಚಾರಮಾಡಿದರು. ಇವರು ತೆಲುಗರಾಗಿದ್ದು ಬಳ್ಳಾರಿಯಲ್ಲಿ ಜನಿಸಿದರು. ನಿಂಬಾರ್ಕರು ರಾಮಾನುಜರ ಸಮಕಾಲೀನರು. ಈ ಸಂತರು ರಾಧಾ–ಕೃಷ್ಣರಿಗೆ ಪ್ರಾಧಾನ್ಯ ಕೊಟ್ಟರು. ಇದೇ ನಿಂಬಾರ್ಕ – ವೈಷ್ಣವ ಪಂಥದ ವೈಶಿಷ್ಟ್ಯ.

ರಾಮಾನುಜ ಮತ್ತು ನಿಂಬಾರ್ಕರ ಧಾರ್ಮಿಕ ಚಟುವಟಿಕೆಯಿಂದ ಆಂಧ್ರದಲ್ಲಿ ಹಿಂದೂ ಧರ್ಮ ಪುನರ್ ಚೇತನ ಗೊಂಡಿತು. ತಿರುಪತಿ, ಕಾಳಹಸ್ತಿ, ದ್ರಾಕ್ಷಾರಾಮಗಳು ಪವಿತ್ರ ಕ್ಷೇತ್ರಗಳಾದವು. ಬೌದ್ಧ ಮತ್ತು ಜೈನ ವಿಹಾರ ಬಸದಿಗಳು ಹಿಂದೂ ಧಾರ್ಮಿಕ ಕೇಂದ್ರಗಳಾದುವು.

ದಕ್ಷಿಣ ಭಾರತದ ಧಾರ್ಮಿಕ ಕ್ಷೇತ್ರದಲ್ಲಿ ಬೆಳಗಿ ಹೋದ ಪ್ರಮುಖ ಧಾರ್ಮಿಕ ವ್ಯಕ್ತಿಯೆಂದರೆ ಬಸವೇಶ್ವರರು. (1105–1167) ಇವರು ಭಕ್ತಿ ಭಂಡಾರಿ ಎಂದು ಪ್ರಸಿದ್ಧರಾಗಿದ್ದರು. ಧಾರ್ಮಿಕ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿ ಶಾಂತಿಯನ್ನುಂಟು ಮಾಡಿದ ಇವರು ವಿಜಾಪುರ ಜಿಲ್ಲೆಯ ಬಾಗೇವಾಡಿಯಲ್ಲಿ ಜನಿಸಿದರು. ಅಂಧ ಸಂಪ್ರದಾಯಗಳನ್ನು ತಿರಸ್ಕರಿಸಿ, ಬಸವೇಶ್ವರರು ಕೂಡಲ ಸಂಗಮದಲ್ಲಿ ವಿದ್ಯಾಭ್ಯಾಸವನ್ನು ಪೂರೈಸಿ ಮಂಗಳವಾಡೆಗೆ ತೆರಳಿದರು. ಇವರ ಕಾರ್ಯದಕ್ಷತೆಯನ್ನು ಮೆಚ್ಚಿಕೊಂಡು ಬಿಜ್ಜಳನು ಇವರನ್ನು ಮಂತ್ರಿಯನ್ನಾಗಿ ಮಾಡಿದನು. ಇಲ್ಲಿಯೇ ಇವರು ಧಾರ್ಮಿಕ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿ ಸುಧಾರಣೆಗಳನ್ನು ಮಾಡತೊಡಗಿದರು. ಜಾತಿ, ಮತ, ಪಂಥಗಳ ಭೇದವಿಲ್ಲದೆ ಶಿವಭಕ್ತರೆಲ್ಲಾ ಒಂದೇ ಎಂದು ಇವರು ಸಾರಿದರು. ಶಿವನಲ್ಲಿ ಅನನ್ಯ ಭಕ್ತಿಯನ್ನು ಬಸವೇಶ್ವರರು ಬೋಧಿಸಿದರು. ಶಿವನ ಸಂಕೇತವಾದ ಲಿಂಗವು ಮಾನವನನ್ನು ಪವಿತ್ರ ಗೊಳಿಸುತ್ತದೆ. ಸಚ್ಛೀಲ ಮತ್ತು ಸತ್ಕಾರ್ಯ ಇವುಗಳಿಂದಲೇ ಮನುಷ್ಯನು ದೊಡ್ಡವನೆನಿಸಿಕೊಳ್ಳುತ್ತಾನಲ್ಲದೆ ಹುಟ್ಟಿದ ಜಾತಿಯಿಂದಲ್ಲ – ಎಂದು ಮನಗಾಣಿಸಿದರು. ಹಿಂದುಳಿದ ಜನಾಂಗ ಮತ್ತು ಸ್ತ್ರೀಯರ ಬಗ್ಗೆ ಅಪಾರ ಅನುಕಂಪವಿರಿಸಿಕೊಂಡಿದ್ದ ಬಸವೇಶ್ವರರು 'ದಯೆಯೇ ಧರ್ಮದ ಮೂಲವಯ್ಯ' ಎಂದು ಸಾರಿದರು. ಬಸವೇಶ್ವರರ ದೃಷ್ಟಿಯಲ್ಲಿ ಇಡೀ ಮಾನವ ಜನಾಂಗ ಒಂದು ಕುಟುಂಬ. ಅಲ್ಲಿ



ಜಾತಿ, ಮತ, ಮೇಲು ಕೀಳು ಎಂಬ ತಾರತಮ್ಯ ಇಲ್ಲ. ಇವರು ನೀಡಿದ ಮತ್ತೊಂದು ಮುಖ್ಯ ತತ್ತ್ವ "ಕಾಯಕವೇ ಕೈಲಾಸ". ಇದು ಮಾನವನ ಸರ್ವತೋಮುಖ ವಿಕಾಸಕ್ಕೆ ಪೋಷಕವಾಗುತ್ತದೆ. ಕಾಯಕದಲ್ಲಿ ಹಿರಿದು ಕಿರಿದೆಂದು ಇಲ್ಲ. ಬಸವೇಶ್ವರರ ಧಾರ್ಮಿಕ ಹಾಗೂ ಸಾಮಾಜಿಕ ಸುಧಾರಣೆಗಳು ಜನರನ್ನು ಆಕರ್ಷಿಸಿದುವು. ತಾತ್ತ್ವಿಕ ಚರ್ಚೆಗಳಿಗಾಗಿ "ಅನುಭವ ಮಂಟಪ" ತಲೆ ಎತ್ತಿತ್ತು. ತಮ್ಮ ಅನಿಸಿಕೆಗಳು ಮತ್ತು ಬೋಧನೆಗಳು ಜನಸಾಮಾನ್ಯರಿಗೆ ತಿಳಿಯುವಂತೆ ಸರಳವಾದ ಕನ್ನಡ ಭಾಷೆಯಲ್ಲಿ ಇವರು ವಚನಗಳನ್ನು ರಚಿಸಿದರು. ಇಂಥ ವಚನಗಳಿಂದ ಕನ್ನಡ ಸಾಹಿತ್ಯವು ಹೊಸ ಹಾದಿಯನ್ನು ಹಿಡಿದು ಶ್ರೀಮಂತಗೊಂಡಿತು. ಇವರ ಕಾಲದಲ್ಲಿಯೇ ಚೆನ್ನಬಸವಣ್ಣ, ಸಿದ್ಧರಾಮ, ಮಡಿವಾಳ ಮಾಚಯ್ಯ, ಅಕ್ಕಮಹಾದೇವಿ—ಮೊದಲಾದವರು ಇವರ ತತ್ತ್ವಗಳನ್ನು ಮುಂದುವರಿಸಿಕೊಂಡು ಹೋದರು.

ಇದೇ ರೀತಿಯಲ್ಲಿ ಆಂಧ್ರದಲ್ಲಿ ಆರಾಧ್ಯ ಶೈವ ಪಂಥ ಬೆಳೆದು ಬಂತು. ಇವರು ಬಸವಣ್ಣನ ಸಮಕಾಲೀನನಾದ ಪಂಡಿತಾರಾಧ್ಯನನ್ನು ತಮ್ಮ ಗುರುಗಳಾಗಿ ಮಾಡಿಕೊಂಡಿದ್ದರು.

ಕರ್ನಾಟಕದಲ್ಲಿ ಶ್ರೀಕೃಷ್ಣನ ಆರಾಧನೆಯನ್ನು ಪ್ರಸಾರ ಮಾಡಿದ ಕೀರ್ತಿ ಮಧ್ವಾಚಾರ್ಯರದಾಗಿದೆ. ಉಡುಪಿಯ ಸಮೀಪದ ಪಾಜಕದಲ್ಲಿ ಜನ್ಮತಾಳಿದ ವಾಸುದೇವರು (ಮಧ್ವಾಚಾರ್ಯರು) ಪೂರ್ಣಪ್ರಜ್ಞರೆಂದು ಬಿರುದುಗಳಿಸಿದರು. ಇವರು ತಮ್ಮ ಜೀವಿತಕಾಲದಲ್ಲಿ ಶಂಕರಾಚಾರ್ಯರ ಮಾಯಾವಾದವನ್ನು ತೀವ್ರವಾಗಿ ಖಂಡಿಸಿದರು. ಭಕ್ತಿಪಂಥವನ್ನು ಬಲಗೊಳಿಸಿದರು. ಘನ ವಿದ್ವಾಂಸರಾದ ಮಧ್ವಾಚಾರ್ಯರು ಮೂವತ್ತೇಳು ಗ್ರಂಥಗಳನ್ನು ಸಂಸ್ಕೃತಭಾಷೆಯಲ್ಲಿ ರಚಿಸಿದ್ದಾರೆ. ಅವುಗಳಲ್ಲಿ ಮುಖ್ಯವಾದುವುಗಳು—ಗೀತಾಭಾಷ್ಯ, ಗೀತಾ ತಾತ್ಪರ್ಯ ನಿರ್ಣಯ, ಸೂತ್ರಭಾಷ್ಯ—ಉಪನಿಷತ್ತಿನ ಬಗ್ಗೆ ಬರೆದ ಟೀಕೆ, ಅಣುಭಾಷ್ಯ, ಭಾರತ ತಾತ್ಪರ್ಯ ನಿರ್ಣಯ, ವಿಷ್ಣುತತ್ತ್ವ ನಿರ್ಣಯ, ತತ್ತ್ವಸಂಖ್ಯಾನ, ತತ್ತ್ವವಿವೇಕ, ಮಾಯಾವಾದ ಖಂಡನೆ, ಇತ್ಯಾದಿ.

ಮಧ್ವಾಚಾರ್ಯರು ಶ್ರೀಕೃಷ್ಣನನ್ನು ಉಡುಪಿಯಲ್ಲಿ ಪ್ರತಿಷ್ಠಾಪಿಸಿದರು. ಶ್ರೀಕೃಷ್ಣನ ಪೂಜೆಯು ಸಾಂಗವಾಗಿ ನಡೆಯುವಂತೆ ಮಧ್ವಾಚಾರ್ಯರು ಎಂಟು ಬಾಲಬ್ರಹ್ಮಚಾರಿಗಳಿಗೆ ಸನ್ಯಾಸದೀಕ್ಷೆಯನ್ನಿತ್ತು ಪ್ರತಿಯೊಬ್ಬರನ್ನೂ ಎರಡೆರಡು ತಿಂಗಳ ಸರದಿಯಂತೆ ಪೂಜೆಮಾಡಲು ನೇಮಿಸಿದರು. ಕೆಲವು ಕಾಲದ ಮೇಲೆ ಆಚಾರ್ಯರು, ಸುಳ್ಯ ತಾಲ್ಲೂಕಿನ ಸುಬ್ರಹ್ಮಣ್ಯದಲ್ಲಿ ಒಂದು ಮಠವನ್ನು ಸ್ಥಾಪಿಸಿದರು.

ವಿಷ್ಣುವಿನೊಂದಿಗೆ ಆಂಜನೇಯನ ಪೂಜೆಯನ್ನು ಬಳಕೆಗೆ ತಂದದ್ದು ಮಧ್ವಾಚಾರ್ಯರ ವೈಷ್ಣವ ಸಿದ್ಧಾಂತದ ಒಂದು ವೈಶಿಷ್ಟ್ಯ. ಆಚಾರ್ಯರು ವಿಷ್ಣುವೇ ಸರ್ವೋತ್ತಮನೆಂದು ಬೋಧಿಸಿದರೂ ಇನ್ನಿತರ ದೇವತೆಗಳ ಆರಾಧನೆಯನ್ನು ವಿರೋಧಿಸಲಿಲ್ಲ. ನಿಶ್ಚಲ ಭಕ್ತಿಯೇ ಮುಕ್ತಿಗೆ ಸಾಧನ ಎಂದು ಮಧ್ವಾಚಾರ್ಯರು ಬೋಧಿಸಿದರು. ಇಷ್ಟಲ್ಲದೇ ಪರಮಾತ್ಮ ಜೀವಾತ್ಮ ಸ್ವರೂಪ ಭೇದಗಳನ್ನು ಇವರು ನಿರ್ಧರಿಸಿದರು. ಈ ಎಲ್ಲಾ ದಾರ್ಶನಿಕ ಪ್ರಯತ್ನದಿಂದ ಹಿಂದೂ ಧರ್ಮದ ಪುನಃಚೇತನ ಗೊಂಡಿತು.

---



ಈ ಆಚಾರ್ಯರ ಧಾರ್ಮಿಕ ಚಟುವಟಿಕೆಗಳ ಪ್ರಭಾವಕ್ಕೆ ಸಮಗ್ರ ಭಾರತ ಒಳಗಾಯಿತು. ಉದಾಹರಣೆಗಾಗಿ ಮಧ್ವಾಚಾರ್ಯರ ದ್ವೈತ ಪಂಥ ಬಂಗಾಳದ ಚೈತನ್ಯರ ಮೇಲೆ ಬಹಳ ಪ್ರಭಾವವನು ಬೀರಿತು. ಭಾರತ ಸಾಂಸ್ಕೃತಿಕ ಒಗ್ಗಟ್ಟಿನ ಬೆಳೆದು ಬರಲು ಈ ಸಾಧುಸಂತರು ಮಾಡಿದ ಸೇವೆ



ಅಗಾಧವಾದದ್ದು. ಇದರಿಂದಾಗಿ ಹಿಂದೂಗಳು ದಕ್ಷಿಣ ಭಾರತದಲ್ಲಿ ಇತರರ ರಾಜಕೀಯ ಆಕ್ರಮಣವನ್ನೂ ತಡೆಗಟ್ಟುವುದಕ್ಕೆ ಆತ್ಮವಿಶ್ವಾಸವನ್ನು ಹೊಂದಿದರು. ಇದರ ಪರಿಣಾಮವಾಗಿಯೇ ಉದಯವಾಯಿತು ವಿಜಯನಗರ ಸಾಮ್ರಾಜ್ಯ. ಈ ಸಾಮ್ರಾಜ್ಯವು ಸುಮಾರು ಮುನ್ನೂರು ವರ್ಷಗಳಷ್ಟುಕಾಲ ಹಿಂದೂ ಧರ್ಮವನ್ನು ರಕ್ಷಿಸಿ ಉಳಿಸಿಕೊಂಡು ಬಂತು. ದಕ್ಷಿಣಭಾರತದ ಯಾತ್ರಾಸ್ಥಳಗಳಾದ ಶ್ರೀರಂಗ, ರಾಮೇಶ್ವರ, ಶ್ರೀಶೈಲ ತಿರುಪತಿ, ಮೇಲುಕೋಟೆ, ಉಡುಪಿ, ಗೋಕರ್ಣ, ಗುರುವಾಯೂರು ಮತ್ತು ಅನಂತಶಯನಗಳು ಧಾರ್ಮಿಕ ಕೇಂದ್ರಗಳಾಗಿ ಸಮಗ್ರ ಭಾರತೀಯರನ್ನು ಆಕರ್ಷಿಸಿ, ಹಿಂದೂ ಧರ್ಮದ ಉಳಿವಿಗೆ ಕಾರಣವಾದವು. ಇದಕ್ಕೆ ಮುಖ್ಯಕಾರಣ ಆಚಾರ್ಯತ್ರಯರ ಮತ್ತು ಬಸವೇಶ್ವರರ ಬೋಧನೆ ಎಂದರೆ ತಪ್ಪಾಗಲಾರದು. ಇವರಿಂದ ದಕ್ಷಿಣ ಭಾರತದ ಭಾಷೆ ಹಾಗೂ ಸಾಹಿತ್ಯಗಳೂ ಶ್ರೀಮಂತಗೊಂಡವು. ಇವರೆಲ್ಲ ದಕ್ಷಿಣ ಭಾರತ ವಾಸ್ತುಶಿಲ್ಪಕ್ಕೆ ಪ್ರೇರಕ ಶಕ್ತಿಯಾದರು. ದಕ್ಷಿಣ ಭಾರತದ ಹಿಂದೂ ಸಂಪ್ರದಾಯವನ್ನು ಉಳಿಸಿ ಬೆಳೆಸಿಕೊಂಡು ಸಮಗ್ರ ಭಾರತದ ಭಾವನಾತ್ಮಕ ಐಕ್ಯತೆಗೆ ಕಾರಣರಾದರು ಎಂದರೆ ಅತಿಶಯೋಕ್ತಿ ಆಗಲಾರದು. ★

# ಕಿಶೋರ ಜಗತ್



# ಸುದಾಮ

ಅವಂತೀ ಪುರದ ಸಾಂದೀಪಿನಿಯೆಂಬ ಗುರುವಿನ ಬಳಿ ಬಲರಾಮ, ಕೃಷ್ಣರು ವಿದ್ಯಾಭ್ಯಾಸ ಮಾಡುತ್ತಿದ್ದರು. ಅಲ್ಲಿಯೇ ಸುದಾಮನು ಸಹ ಸಹಪಾಠಿಯಾಗಿದ್ದ. ಇವರಿಗೆ ಸುದಾಮನಲ್ಲಿ ಅತೀವವಾದ ವಿಶ್ವಾಸವಿತ್ತು. ಸುದಾಮನೂ ಸಹ ಸೋದರ ಪ್ರೇಮದಿಂದ ವರ್ತಿಸುತ್ತಿದ್ದ. ಶಿಷ್ಯರು ಗುರುಗಳ ಮನೆಗೆ ಆಗಾಗ್ಗೆ ಸೌದೆಯನ್ನು ತಂದು ಹಾಕುತ್ತಿದ್ದರು. ಕೃಷ್ಣನಿಗೆ ಸುದಾಮನು ಇಂಥ ಕಷ್ಟವಾದ ಕೆಲಸದಲ್ಲಿ ಸಹಾಯ ಮಾಡುತ್ತಿದ್ದನು. ವಿದ್ಯಾಭ್ಯಾಸ ಮುಗಿದ ಕೂಡಲೇ ಈ ಮೂವರು ತಮ್ಮ ತಮ್ಮ ಮನೆಗಳಿಗೆ ತೆರಳಿದರು. ಇತ್ತ ಬಲರಾಮ, ಕೃಷ್ಣರು ಬೇಕಾದ ಐಶ್ವರ್ಯದಿಂದ ಸಂತೋಷವಾಗಿದ್ದರು. ಸುದಾಮನು ಹರಕು ಬಟ್ಟೆಯನ್ನು ಉಟ್ಟು ಜೂಲು ಬಟ್ಟೆಯನ್ನು ಹೊದ್ದು ಬಹಳ ಬಡತನದಿಂದ ಕಷ್ಟಪಡುತ್ತಿದ್ದನು.

ಸುದಾಮನು ಗೃಹಸ್ಥಾಶ್ರಮವನ್ನು ಸ್ವೀಕರಿಸಿ ಅತ್ಯಲ್ಪ ವಸ್ತುವಿನಿಂದಲೂ ಸಂತುಷ್ಟನಾಗಿದ್ದನು. ಒಂದು ದಿನ ಪತಿವ್ರತೆಯರಲ್ಲಿ ಆದರ್ಶಳಾದ ಆತನ ಹೆಂಡತಿ ಗಂಡನನ್ನು ಕುರಿತು "ಈ ಬಡತನವನ್ನು ಸಹಿಸಲು ಆಗುವುದಿಲ್ಲ. ತಮ್ಮ ಸ್ನೇಹಿತನಾದ ಶ್ರೀಕೃಷ್ಣನ ಬಳಿಗಾದರೂ ಹೋಗಿ ಯಾಚನೆಯನ್ನು ಮಾಡಿಕೊಂಡು ಬನ್ನಿ, ನಾಲ್ಕು ದಿನ ಹೊಟ್ಟೆ ಹೊರೆಯಬಹುದು" ಎಂದಳು. ತನ್ನ ಹೆಂಡತಿಯ ಒತ್ತಾಯದಿಂದ ಬಾಲ್ಯ ಸ್ನೇಹಿತನಾದ ಶ್ರೀಕೃಷ್ಣನನ್ನು ನೋಡಲು ಸಿದ್ಧನಾದನು.

ಸುದಾಮನು 'ದೊಡ್ಡವರನ್ನು ಬರೀ ಕೈಯಲ್ಲಿ ಹೋಗಿ ನೋಡಬಾರದು. ಹಣ್ಣನ್ನಾಗಲೀ ಹೂವನ್ನಾಗಲೀ ತೆಗೆನುಕೊಂಡು ಹೋಗಿ ಕೊಡಬೇಕು; ನಮಗೆ ಏನೂ ಗತಿಯಿಲ್ಲವಲ್ಲ' ಎಂದು ಪೇಚಾಡಿದನು. ಆಗ ಅವನ ಹೆಂಡತಿಯೂ ಮನೆ ಮನೆಗೂ ಸುತ್ತಿ ಮೂರು ಹಿಡಿ ಅವಲಕ್ಕಿ ಸಾಲವಾಗಿ ತಂದಳು. ಸುದಾಮನು ಅದನ್ನು ಹರಕು ಬಟ್ಟೆಯಲ್ಲಿ ಕಟ್ಟಿಕೊಂಡು ಶ್ರೀಕೃಷ್ಣನ ಅರಮನೆಯನ್ನು ಸೇರಿದನು. ಸುದಾಮನ ಆಗಮನ ವಾರ್ತೆಯನ್ನು ತಿಳಿದು ದ್ವಾರದ ಬಳಿಗೆ ಆತ ತಾನೇ ಬಂದು ಒಳಕ್ಕೆ ಕರೆದುಕೊಂಡು ಹೋದನು.

ಬಾಲ್ಯದಲ್ಲಿನ ಹಾಗೇ ಸುದಾಮನೊಡನೆ ಸಲಿಗೆಯಲ್ಲಿ ಮಾತನಾಡುತ್ತಾ ಹಾಸ್ಯವನ್ನು ಮಾಡುತ್ತಾ ಆದರದಿಂದ ಕಂಡನು. "ಏನು ಅಣ್ಣಯ್ಯ, ನೀನು ಅಲ್ಲಿಂದ ನನ್ನನ್ನು ಹುಡುಕಿಕೊಂಡು ಬಂದೆಯಲ್ಲಾ, ನನಗೆ ತಿನ್ನುವುದಕ್ಕೆ ಏನನ್ನು ತಂದಿದ್ದೀಯೆ? ನಮ್ಮ ಅತ್ತಿಗೆ ನನಗೋಸ್ಕರವಾಗಿ ಏನನ್ನು ಕಳಿಸಿದ್ದಾಳೆ?" ಎಂದನು. ಆಗ ಸುದಾಮನು "ಸ್ವಾಮಿ, ಸಕಲ ಸೌಭಾಗ್ಯಕ್ಕೂ ತೌರು ಮನೆಯಾದ ಲಕ್ಷ್ಮಿ ತಾನೂ ಉದ್ಧಾರವಾಗಬೇಕೆಂಬ ಧ್ಯೇಯದಿಂದ ನಿನ್ನ ಕೈ ಹಿಡಿದು ನಿನ್ನ ಮನೆಯಲ್ಲಿ ನೆಲೆಯಾಗಿದ್ದಾಳೆ. ಕ್ಷಾಮ ದೇವತೆಯು ನನ್ನ ಮನೆಯನ್ನು ಬಿಟ್ಟು ಅಡ್ಡಾಡಳು. ಲೋಕದಲ್ಲಿ ಭಾಗ್ಯಕ್ಕೆ ನೀನು, ಬಡತನಕ್ಕೆ ನಾನು, ಹೀಗೆ ನಾವಿಬ್ಬರು ಪ್ರಸಿದ್ಧರು. ಆದರೂ ಹಿಡಿ" ಎಂದೂ ಒಪ್ಪಿಡಿ ಅವಲಕ್ಕಿಯನ್ನು ಸಂಕೋಚದಿಂದ ಸ್ವಾಮಿಗೆ ಕೊಟ್ಟನು. ಆಗ ಕೃಷ್ಣನು "ಅಯ್ಯಾ, ಇಷ್ಟು ಪ್ರೇಮದಿಂದ ನನಗೆ ಯಾರು ತಂದು ಕೊಡುತಾರೆ? ನೀನು ತಂದುಕೊಟ್ಟ ಅವಲಕ್ಕಿಯೇ ಒಂದು ಕೋಟಿ. ಯಾಕೆಂದರೆ ಈ ಅವಲಕ್ಕಿಯನ್ನು ನಿನ್ನ ಪ್ರೇಮವೆಂಬ ರಸಾಯನದಲ್ಲಿ ಕಲೆಸಿ ಇದ್ದೀಯೇ; ಮಿತ್ರನಿಗೆ ಮಿಗಿಲಾದ ವಸ್ತುವಾವುದು. ತಾ ವಸ್ತುವನ್ನು" ಎಂದು ಅವಲಕ್ಕಿಯನ್ನು ಈಸಿಕೊಂಡು ಕೃಷ್ಣ, ರುಕ್ಮಿಣಿ ತಿಂದರು.

ಕೃಷ್ಣನ ಉಪಚಾರವನ್ನು ಪಡೆದು ಸುದಾಮ ತನ್ನ ಮನೆಯ ದಾರಿಯನ್ನು ಹಿಡಿದನು. ಗ್ರಾಮದ ಸಮೀಪಕ್ಕೆ ಬರುತ್ತಲೇ ಸುದಾಮನು ಭ್ರಾಂತಿಗೊಂಡ, ಕೃಷ್ಣನ ಅಪ್ಪಣೆಯಂತೆ ವಿಶ್ವಕರ್ಮ ಆ ಗ್ರಾಮವನ್ನೆಲ್ಲ ದಿವ್ಯ ನಗರಿಯನ್ನಾಗಿಸಿದ್ದ. ಸುದಾಮನಿಗೆ ತನ್ನ ಮನೆಯ ಗುರುತೇ ತೋರದಾಯಿತು. ಸುದಾಮನ ಪತ್ನಿ ದಿವ್ಯ ವಸ್ತ್ರಾಭರಣ ಭೂಷಿತಳಾಗಿ ಬಂದು ಎದುರ್ಗೊಂಡು ಒಳಕ್ಕೆ ಕರೆದೊಯ್ದಳು. ಸುದಾಮ ಕೃಷ್ಣನ ಮಹಿಮೆಯನ್ನು ಮಾಡುತ್ತಾ ಸಂತೋಷದಿಂದ ಕಾಲಹರಣ ಕೊಂಡಾಡುತ್ತಾ ಪತ್ನಿ, ಮಕ್ಕಳೊಂದಿಗೆ ಸುಖವಾಗಿದ್ದನು.

**ಶ್ರೀ ಜಿ. ಶ್ರೀಧರ್**

‘ರಾಮಾನುಜ ನೂತ್ತಂದಾದಿ’ಯು ವಿಶಿಷ್ಟಾದ್ವೈತ ಸಿದ್ಧಾಂತದ ‘ಪ್ರಸನ್ನ ಗಾಯತ್ರಿ’ ಎಂದು ಪ್ರಸಿದ್ಧವಾಗಿದೆ. ಈ ಪ್ರಬಂಧದಲ್ಲಿ ಅಮುದನಾರ್ ರವರು ಯತಿವರ್ಯರ ಕೃಪಾಗುಣ, ಉದಾರ ಮನಸ್ಸು, ಸರ್ವಜನೋದ್ಧಾರಕ ಆಸಕ್ತಿ, ಆಚಾರ್ಯ ನಿಷ್ಠೆಯ ಪ್ರಭಾವ, ಸತ್ಯಮಾರ್ಗ ವರ್ತನೆಯ ಆಕಾಂಕ್ಷೆ, ಸ್ವಪ್ರಯೋಜನತ್ಯಾಗ – ಮುಂತಾದ ಕಲ್ಯಾಣಗುಣಗಳನ್ನು ದ್ರಾವಿಡ ಭಾಷೆಯಲ್ಲಿ ರಸವತ್ತಾಗಿ ವರ್ಣಿಸಿರುವರು. ಶ್ರೀ ವೈಷ್ಣವ ಸಿದ್ಧಾಂತದ ಮುಖ್ಯತತ್ತ್ವಗಳಲ್ಲಿ ಸುಲಭೋಪಾಯವಾದ ‘ಶರಣಾಗತಿ ತತ್ತ್ವ’ವನ್ನು ಮನುಷ್ಯರು ಯಾವರೀತಿ ಸಾಧನೆ ಮಾಡಬೇಕೆಂಬುದನ್ನು ವಿವರಿಸಿರುವರು. ‘ಎನಕ್ಕುತ್ತ ಶೆಲ್ವಮಿರಾಮಾನುಜನ್’-ನನಗೆ ಸ್ವರೂಪಾರೂಪವಾದ ಸಂಪತ್ತು ಶ್ರೀ ರಾಮಾನುಜರು – ಎಂದು ಅಮುದನಾರ್ರು ಹೇಳಿದ್ದಾರೆ.

ವಿಂದಗಳಲ್ಲಿ ಅತ್ಯಂತ ಪ್ರೀತಿಯುಳ್ಳವರಾದ ರಾಮಾನುಜಾಚಾರ್ಯರ ಕಲ್ಯಾಣ ಗುಣಗಳನ್ನು ಬಿಟ್ಟು, ತಮ್ಮ ನಾಲಗೆಯು ಬೇರೊಂದನ್ನು ಧ್ಯಾನಿಸುವುದಿಲ್ಲವೆಂದು ಅಮುದನಾರ್’ರವರು ಹೇಳುತ್ತಾರೆ. ಇಂಥಾ ಮಹತ್ತಾದ ಪುರುಷಾರ್ಥ ಉಪಾಯ ವಿಶೇಷವು ಯಾವುದರಿಂದ ಲಭಿಸಿತೊ ತಮಗೇ ತಿಳಿಯದೆಂದು ಆಶ್ಚರ್ಯ ಪಡುತ್ತಾರೆ. ರಾಮಾನುಜರ ವಿಷಯದಲ್ಲಿ ಪ್ರೀತಿ ಎಂಬ ಭಕ್ತಿಯುಕ್ತರಾದ, ಶ್ಲಾಘ್ಯವಾದ ಪುರುಷಾರ್ಥಗಳನ್ನು ಪಡೆದಿರುವ ಮಹಾನುಭಾವರುಗಳ ಪಾದಗಳ ಆಶ್ರಯ ಪಡೆಯಲು ಉಪಕಾರ ಮಾಡಿದ ಭಾಗವತರುಗಳಿಗೆ ತಾವು ಏನು ಪ್ರತ್ಯುಪಕಾರ ಮಾಡಬಲ್ಲೆನೆಂದು ಅಮುದನಾರ್’ರವರು ತಾವೇ ತಮ್ಮ ಮನಸ್ಸನ್ನು ಪ್ರಶ್ನಿಸಿಕೊಳ್ಳುತ್ತಾರೆ.

ರಾಮಾನುಜರು ಅಜ್ಞಾನದಿಂದ ಅನಾದಿಯಾಗಿ ಬರುತ್ತಿದ್ದ ಪ್ರಾಚೀನ ಕರ್ಮ ಫಲಗಳನ್ನು ನಿರ್ಮೂಲನಮಾಡಿ ಈ ಭೂಲೋಕದಲ್ಲಿ ತಮ್ಮನ್ನು ಸುಲಭಸಾಧ್ಯವೆಂದು ಅಮುದನಾರ್’ರವರು ಹೇಳುತ್ತಾರೆ.

‘ಪೊಯ್‌ಗೈಯಾಳ್ವಾರ್’ರವರು ವೇದಾಂತಾರ್ಥಗಳನ್ನೆಲ್ಲಾ ಸುಲಭವಾಗಿ ಎಲ್ಲರಿಗೂ ತಿಳಿಯುವಂತೆ ತಮಿಳು ಭಾಷೆಯಲ್ಲಿ ಪ್ರಬಂಧರೂಪವಾಗಿ ‘ಮೊದಲ ತಿರುವಂದಾದಿ’ ಎಂದು ನೂರು ಪಾಶುರಗಳನ್ನು ರಚಿಸಿರುವರು. ಇದರಲ್ಲಿ ವಿಶದೀಕರಿಸಿರುವ ಜ್ಞಾನ ಸಾರದ ಬೆಳಕನ್ನು ತಮ್ಮ ಹೃದಯದಲ್ಲಿ ದೃಢವಾಗಿ ನಿಲ್ಲುವಂತೆ ಮಾಡಿದ ರಾಮಾನುಜಾಚಾರ್ಯರೇ ತಮಗೆ ಜ್ಞಾನಾಭಿವರ್ಧಕರಾದ ಗುರುಗಳು ಎಂದು ಅಮುದನಾರ್ ರವರು ಹೇಳುತ್ತಾರೆ.

ಸರ್ವೇಶ್ವರನನ್ನು ಸಾಕ್ಷಾತ್ಕರಿಸುವುದಕ್ಕಾಗಿಯೇ ಅವತರಿಸಿದವರು ‘ಭೂದತ್ತಾಳ್ವಾರ್’ ರವರು. ಇವರು ಹೃದಯದ ಅಂಧಕಾರವು ತೊಲಗಿಸುವ ಜ್ಞಾನವೆಂಬ ದೀಪವನ್ನು

# ರಾಮಾನುಜ ನೂತ್ತಂದಾದಿ

ಸರ್ವೇಶ್ವರನ ಅಸಂಖ್ಯೇಯ, ನಿರವದ್ಯ, ನಿರತಿಶಯ ಕಲ್ಯಾಣಗುಣಗಳನ್ನು ಎಲ್ಲರಿಗೂ ಬೋಧಿಸತಕ್ಕ ‘ತಿರುವಾಯ್ಮೊಳಿ’ಯನ್ನು ಪ್ರಕಾಶಪಡಿಸಿದ ನಮ್ಮಾಳ್ವಾರ್’ರವರ ಪಾದವನ್ನು ಆಶ್ರಯಿಸಿ ಅವರು ಉಜ್ಜೀವಿಸಿದರು. ಪ್ರವೀಣರುಗಳಾದ ಕೂರೇಶ, ಕುರುಕೇಶ, ಗೋವಿಂದ, ಯಾದವಪ್ರಕಾಶ–ಇವರುಗಳು ತಮ್ಮ ಸಂದೇಹಗಳನ್ನು ಪರಿಹರಿಸಿಕೊಳ್ಳುವಂತೆ ರಾಮಾನುಜಾಚಾರ್ಯರು ಭಗವದಾಜ್ಞಾರೂಪವಾಗಿ ಪರಮಪದದಿಂದ ಈ ಭೂಲೋಕದಲ್ಲಿ ಅವತರಿಸಿದರು. ಇವರು ‘ಶ್ರೀ ಭಾಷ್ಯಾ’ದಿ ಗ್ರಂಥಗಳನ್ನು ಪ್ರಚುರಪಡಿಸಿ ತತ್ತ್ವಹಿತ ಪುರುಷಾರ್ಥಗಳನ್ನು ಪ್ರಚಾರಮಾಡಿ ಎಲ್ಲರಿಗೂ ಮಹದುಪಕಾರ ಮಾಡಿದರು. ಇಂತಹವರ ತಿರುನಾಮಗಳನ್ನು ಹೇಳಿ ಶಾಶ್ವತವಾದ ಸುಖವನ್ನು ಪಡೆಯೋಣವೆಂದು ಹೇಳುತ್ತಾರೆ ಅಮುದನಾರ್’ರವರು.

ತಿರುಕ್ಕುರೈಯಲೂರಿನಲ್ಲಿ ಅವತರಿಸಿ ಪ್ರಬಂಧಗಳನ್ನು ರಚಿಸಿ ಶ್ರೀರಂಗನಾಥಸ್ವಾಮಿಯ ಪಾದಾರವಿಂದಗಳಲ್ಲಿ ಅನನ್ಯ ಭಕ್ತಿಯನ್ನು ಹೊಂದಿದ್ದ ತಿರುಮಂಗೈ ಆಳ್ವಾರ್’ರವರ ಪಾದಾರ

ಓರ್ವ ವ್ಯಕ್ತಿಯನ್ನಾಗಿ ಮಾಡಿದರು. ಅಂತಹ ಪರತತ್ತ್ವ ಪ್ರತಿಪತ್ತಿ ಮಾಡಿದವರಾದ ರಾಮಾನುಜರು ತಮ್ಮ ಅಥವಾ ಭಗವಂತನ ಶ್ಲಾಘ್ಯವಾದ ಪಾದಗಳನ್ನು ಶಿರಸಾವಹಿಸುವಂತೆ ಅನುಗ್ರಹಿಸಿರುವುದರಿಂದ ತಮಗೆ ಯಾವ ಕೊರತೆಯೂ ಇಲ್ಲವೆನ್ನುತ್ತಾರೆ.

ಮಾತುಗಳಿಂದ ವರ್ಣಿಸಲಸಾಧ್ಯವಾದ ಕೀರ್ತಿಯುಕ್ತರಾಗಿಯೂ ಚೇತನರನ್ನು ವಂಚಿಸಿ ದುರ್ಮಾರ್ಗಗಳೆಂಬ ಹಳ್ಳಕ್ಕೆ ಎಳೆಯುವ ಕುಲಮದ, ವಿದ್ಯಾಮದ, ವ್ಯಕ್ತಿ ಮದಗಳೆಂಬ ಅಹಂಕಾರ ಮದಗಳನ್ನು ತಮ್ಮ ತತ್ತ್ವೋಪದೇಶಗಳಿಂದ ದಾಟಿಸಬಲ್ಲ ಮತ್ತು ಚೇತನರನ್ನು ಉದ್ಧರಿಸುವುದಕ್ಕಾಗಿಯೇ ಇಲ್ಲಿ ಅವತರಿಸಿದ ‘ಕೂರಮ್’ ಎಂಬ ದಿವ್ಯದೇಶಕ್ಕೆ ನಿರ್ವಾಹಕರಾದ ‘ಕೂರತ್ತಾಳ್ವಾರ್’ರವರ ಪಾದಗಳನ್ನು ಆಶ್ರಯಿಸಿದ ಮೇಲೆ ಅಪವಾದಗಳಿಂದ ಕೂಡಿದ ಪಾಪಗಳನ್ನು ಹೋಗಲಾಡಿಸಬಲ್ಲ ರಾಮಾನುಜರ ಗುಣಗಾನಮಾಡಿ ಸ್ವರೂಪ ವಿರುದ್ಧವಾದ ಕೆಟ್ಟ ಮಾರ್ಗವನ್ನು ಹೋಗಲಾಡಿಸಿಕೊಂಡ ನಮಗೆ ಇನ್ನುಮೇಲೆ ಎಲ್ಲಾ ವಿಷಯವೂ

‘ಇರಣ್ಡಾಮ್ ತಿರುವನ್ದಾದಿ’ ಎಂಬ ನೂರು ಪದ್ಯಗಳ ದ್ರಾವಿಡ ಪ್ರಬಂಧದ ಮೂಲಕ ಪ್ರಕಾಶಪಡಿಸಿದರು. ಇಂತಹವರ ಸಿರಿಯಡಿಗಳನ್ನು ತಮ್ಮ ಹೃದಯದಲ್ಲಿ ಸದಾ ನೆಲಸುವಂತೆ ಮಾಡಿದ ರಾಮಾನುಜಾಚಾರ್ಯರ ಕಲ್ಯಾಣ ಗುಣಗಳನ್ನು ಕೀರ್ತಿಯನ್ನೂ ಕೊಂಡಾಡಿದ ಅಮುದನಾರ್ ರವರು ಅವರನ್ನು ‘ವೇದಮಾರ್ಗ ಪ್ರತಿಷ್ಠಾಪಕರು’ ಎಂದು ಕರೆಯುತ್ತಾರೆ.

ತಿರುಕಣ್ಡೇನ್ – ಪೊನ್ಮೇನಿಕಣ್ಡೇನ್ ಎಂದು ಪ್ರಾರಂಭವಾಗುವ ಮೂರನೇ ತಿರುವಂದಾದಿಯ ನೂರು ಪದ್ಯಗಳನ್ನು ರಚಿಸಿ ಸ್ತೋತ್ರಮಾಡಿದವರು ಪೇಯಾಳ್ವಾರ್’ರವರು. ದ್ರಾವಿಡ ಭಾಷೆಯಲ್ಲಿ ಇರುವ ಈ ಪದ್ಯಗಳು ಚೇತನರ ಆತ್ಮವನ್ನು ಆವರಿಸಿಕೊಂಡಿರುವ ಅಜ್ಞಾನವೆಂಬ ಅಂಧಕಾರವನ್ನು ನಾಶಪಡಿಸಿದ ತರುವಾಯ ಲಕ್ಷ್ಮೀದೇವಿ ಮತ್ತು ಸರ್ವೇಶ್ವರನಾದ ಶ್ರೀಕೃಷ್ಣನನ್ನು

ಶ್ರೀಮತಿ ಬಿ. ಎಸ್. ವಿಜಯಮ್ಮ

# ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಆಧ್ಯಾತ್ಮಿಕ. ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸ ಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನಾ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸ ಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ-517507
ಚಿತ್ತೂರು ಜಿಲ್ಲೆ, ಆಂ. ಪ್ರ.

'ಪೆರಿಯಾಳ್ವಾರ್'ರವರು ಸಾಕ್ಷಾತ್ಕರಿಸಿದರು. ಅಂತಹ ಸರ್ವೇಶ್ವರನ ಸುಂದರವಾದ ಪಾದಗಳನ್ನು ಧ್ಯಾನಿಸಿ ಸ್ತೋತ್ರ ಮಾಡುತ್ತಿರುವ ರಾಮಾನುಜರಲ್ಲಿ ಭಕ್ತಿಯನ್ನು ನಿರಂತರವಾಗಿ ಹೊಂದಿರುವವರೇ ಮಹಾಭಾಗ್ಯಶಾಲಿಗಳು ಎಂದು ಅಮುದನಾರ್‌ರವರು ತಿಳಿಸುತ್ತಾರೆ.

'ಅಮಲನಾದಿಪ್ಪಿರ್‌ಾ' ಎಂಬ ದ್ರಾವಿಡ ಪ್ರಬಂಧವನ್ನು 'ತಿರುಪ್ಪಾಣಿಯಾಳ್ವಾರ್'ರವರು ರಚಿಸಿದ್ದಾರೆ. ಇದನ್ನು ಶ್ರೀರಂಗನಾಥಸ್ವಾಮಿಗೆ ಒಪ್ಪುವಂತೆ ಅವರು ಇಂಪಾಗಿ ಹಾಡಿದ್ದಾರೆ. ಇಂತಹ ತಿರುಪ್ಪಾಣಿ ಆಳ್ವಾರ್‌ರವರ ಚರಣಾರವಿಂದಗಳನ್ನು ಪುಷ್ಪದಂತೆ ತಮ್ಮ ಶಿರಸ್ಸಿನಲ್ಲಿ ಧರಿಸಿಕೊಂಡಿರುವ ನಮ್ಮ ಎಂಬೆರುಮಾನಾರರನ್ನು (ರಾಮಾನುಜರನ್ನು) ಆಶ್ರಯಿಸಿದ ಕೂರತ್ತಾಳ್ವಾರ್ ಮೊದಲಾದ ಆಚಾರ್ಯರ ಕೈಂಕರ್ಯವನ್ನು ಈ ಭೂಲೋಕದಲ್ಲಿ ಮಾಡುವ ಕ್ರಮವನ್ನು ತಮ್ಮಿಂದ ವರ್ಣಿಸಲು ಸಾಧ್ಯವಿಲ್ಲವೆಂದು ಅಮುದನಾರ್‌ರವರು ಹೇಳುತ್ತಾರೆ.

'ತೊಂಡರಡಿಪ್ಪೊಡಿಯಾಳ್ವಾರ್'ರವರು 'ತಿರುಮಾಲೆ' ಎಂಬ ದ್ರಾವಿಡ ಪ್ರಬಂಧವನ್ನೂ, ತಮ್ಮ ಸ್ವಹಸ್ತದಿಂದ ಕಟ್ಟಿದ ತುಳಸೀಹಾರಗಳನ್ನೂ, ಶ್ರೀರಂಗಕ್ಷೇತ್ರದ ಶ್ರೀರಂಗನಾಥಸ್ವಾಮಿಗೆ ಅರ್ಪಿಸಿದರು. ಇಂತಹವರ ಪಾದಗಳನ್ನು ಬಿಟ್ಟು ಬೇರೊಂದನ್ನು ಆದರಿಸದ ಎಂಬೆರುಮಾನಾರ್‌ರವರ ಪಾದಗಳೇ ತಮಗೆ ಗತಿ, ಬೇರೆ ಯಾವುದೂ ಅಲ್ಲ ಎಂದು ಅಮುದನಾರ್ ರವರು ಹೇಳುತ್ತಾರೆ.

'ಪೆರುಮಾಳ್ ತಿರುಮೊಳಿ' ಎಂಬ ಶಾಸ್ತ್ರಸಾರಭೂತವಾದ ದಿವ್ಯ ಪ್ರಬಂಧವನ್ನು 'ಕುಲಶೇಖರಾಳ್ವಾರ್'ರವರು ರಚಿಸಿರುವರು. ಇದನ್ನು ಹಾಡುವ ಮಹಾತ್ಮರುಗಳಾದ ನಾಥಮುನಿಗಳು. ಆಳವಂದಾರ್ ಮತ್ತು ಅವರ ಶಿಷ್ಯರ ಶ್ರೀಪಾದಗಳನ್ನೇ ಆಶ್ರಯಿಸಿ ಸ್ತೋತ್ರಮಾಡುವ ಎಂಬೆರುಮಾನಾರ್ ನಮ್ಮನ್ನು ಎಂದಿಗೂ ಕೈ ಬಿಡುವುದಿಲ್ಲ. ಆದ್ದರಿಂದ ಕಷ್ಟಕರವಾದ ತಪಸ್ಸು ಮಾಡಿ ಲೋಕಕ್ಕೆ ಕ್ಷೋಭೆಯನ್ನುಂಟುಮಾಡುವುದನ್ನು ಬಿಟ್ಟು ಬಿಟ್ಟಿರುವುದಾಗಿ ಹೇಳುತ್ತಾರೆ.

'ತಿರುಪ್ಪಲ್ಲಾಂಡು' ಎಂಬ ಪ್ರಬಂಧದಿಂದ ಮಂಗಳಾಶಾಸನದ ಪದ್ಯಮಾಲೆಯನ್ನು ರಚಿಸಿರುವ 'ಪೆರಿಯಾಳ್ವಾರ್'ರವರ ಶ್ರೀಪಾದಗಳನ್ನು ಆಶ್ರಯಿಸಿರುವ ಎಂಬೆರುಮಾನಾರ್‌ರವರನ್ನು ಆಶ್ರಯಿಸದೇ ಇರುವವರನ್ನು ತಾವು ಸೇರುವುದಿಲ್ಲ. ಹೀಗಿರುವಾಗ ತಮಗೆ ಯಾವ ಕೊರತೆಯೂ ಇಲ್ಲವೆಂದು ಅಮುದನಾರ್‌ರವರು ಹೇಳುತ್ತಾರೆ. ವೇದಗಳೂ ಕಲಿದೋಷದಿಂದಲೂ, ದುಷ್ಟ ಜನಗಳಿಂದಲೂ ಹೀನಸ್ಥಿತಿಗೆ ಬಂದಿತ್ತು. ಆ ಕಾಲದಲ್ಲಿ ಭಗವಂತನ ಕೃಪೆಯಿಂದ ಶ್ರೀಪೆರುಂಬುದೂರಿಗೆ ಬಂದು ಎಂಬೆರುಮಾನಾರ್‌ರವರು ಅವತರಿಸಿದರು. ಹೀನಸ್ಥಿತಿಯಲ್ಲಿದ್ದ ವೇದಗಳನ್ನೂ ಚೇತನರನ್ನೂ ಉದ್ಧಾರಮಾಡಿ ಉಜ್ಜೀವಿಸುವಂತೆ ಮಾಡಿದರು. ಇವರನ್ನು ಆಶ್ರಯಿಸಿ ಉಜ್ಜೀವನ ಪಡೆಯಿರಿ ಎಂದು ಚೇತನರುಗಳಿಗೆ ಅಮುದನಾರ್‌ರವರು ಹೇಳುತ್ತಾರೆ.

ಸಂಸ್ಕೃತ ರೂಪವಾದ ವೇದಾರ್ಥಗಳನ್ನು ಮಂದಮತಿಗಳು ಸುಲಭವಾಗಿ ತಿಳಿಯುವಂತೆ 'ತಿರುವಾಯ್‌ಮೊಳಿ' ಎಂಬ ಸಾವಿರ ಪದ್ಯಗಳಿರುವ ಪ್ರಬಂಧವನ್ನು ದ್ರಾವಿಡ ಭಾಷೆಯಲ್ಲಿ 'ನಮ್ಮಾಳ್ವಾರ್'ರವರು ರಚಿಸಿದ್ದಾರೆ. ಇದನ್ನು ರಾಮಾನುಜಾಚಾರ್ಯರು ಸಕಲ ಚೇತನರಿಗೂ ಬೋಧಿಸಿ ಉಜ್ಜೀವಿಸಿದರು. ಅಂತಹವರು ತಮಗೆ ಪರಮ ಭೋಗ್ಯವಾದ ಅಮೃತಪ್ರಾಯರು ಎಂದೂ ರಾಮಾನುಜರನ್ನೂ ನಮ್ಮಾಳ್ವಾರರ ದಿವ್ಯ ಪ್ರಬಂಧವಾದ 'ತಿರುವಾಯ್ಮೊಳಿ'ಯನ್ನೂ ಕೊಂಡಾಡುತ್ತಾರೆ.

ಮತ್ತೊಂದು ಸಂದರ್ಭದಲ್ಲಿ 'ತಿರುವಾಯ್ಮೊಳಿ'ಯನ್ನು ಅರ್ಥಸಹಿತ ಅಭ್ಯಾಸಮಾಡಿ ಜ್ಞಾನಾಧಿಕರಾದ 'ಮಧುರಕವಿ ಆಳ್ವಾರ್', 'ತಿರುಮಂಗೈ ಆಳ್ವಾರ್'ರವರುಗಳ ವಿಷಯದಲ್ಲಿ ಅತಿ ಪ್ರೀತಿಯನ್ನು ಹೊಂದಿದ್ದ 'ಪರಾಂಕುಶ ನಂಬಿ'ಯವರ ಮತ್ತು 'ನಾಥಮುನಿ'ಗಳ ವಿಗ್ರಹಗಳನ್ನು ಮನಃಪೂರ್ವಕವಾಗಿ ಆರಾಧಿಸುತ್ತಿರುವ ಎಂಬೆರುಮಾನಾರ್‌ರವರೇ ತಮಗೆ ಮಹಾನಿಧಿಗಳು ಎಂದು ಅಮುದನಾರ್‌ರವರು ಹೇಳಿ ತೃಪ್ತರಾಗುತ್ತಾರೆ.

ಆಳವಂದಾರ್‌ರವರ ಪಾದಗಳನ್ನೇ ಅಪ್ರಾಕೃತ ಧನವೆಂದು ನಂಬಿ, ಇತರ ವಿಷಯಗಳನ್ನು ತ್ಯಜಿಸಿದ್ದ ರಾಮಾನುಜಾಚಾರ್ಯರು ತಮಗೂ ಅನುಗ್ರಹ ಮಾಡಿದ್ದಾರೆ. ಇನ್ನು ತಮಗೆ ಇತರ ಜನಗಳಲ್ಲಿ ಧನದಾನ ಮಾಡಿ ಎಂದು ಸ್ತೋತ್ರ ಮಾಡುವ ಕಷ್ಟವಿಲ್ಲವೆಂದು ಹೇಳುತ್ತಾರೆ.

ರಾಮಾನುಜರೇ ತಮಗೆ ಪರಮ ಧನವೆಂದೂ, ಅವರನ್ನು ತಮ್ಮ ಹೃದಯದಲ್ಲಿಟ್ಟುಕೊಂಡು ಸ್ತುತಿಸುವುದಾಗಿ ಹೇಳಿಕೊಳ್ಳುತ್ತಾರೆ. ತಮ್ಮದು ಕಪಟ ಮನಸ್ಸು. ಅವರನ್ನೂ, ಅವರ ಕಲ್ಯಾಣ ಗುಣಗಳನ್ನೂ ವಿವರಿಸಿ ಸ್ತೋತ್ರ ಮಾಡುವುದರಿಂದ ರಾಮಾನುಜಾಚಾರ್ಯರ ಸತ್ಕೀರ್ತಿಗೆ ಕುಂದೇನಾದರೂ ಉಂಟಾಗುವುದೇನೋ ಎಂದು ಸಂಶಯಗೊಳ್ಳುತ್ತಾರೆ.

ಹಿಂದೆ ಮಾಡಿದ ಕರ್ಮಫಲ ಪ್ರಭಾವದಿಂದ ತಾವು ಮನುಷ್ಯ ಜನ್ಮದಲ್ಲಿ ಹುಟ್ಟಿ ನಾನಾ ಕಷ್ಟ

ದಿಂದ ನಾಶವಾಗಿರುವುದಾಗಿ ಹೇಳಿರುವರು. ಅನ್ಯ ಮತಗಳನ್ನು ಖಂಡಿಸಿ 'ಶ್ರೀ ಭಾಷ್ಯ', 'ಗೀತಾ ಭಾಷ್ಯ' ಇತ್ಯಾದಿ ಗ್ರಂಥಗಳನ್ನು ರಚಿಸಿ ಉಪಕಾರ ಮಾಡಿದ ಎಂಬೆರುಮಾನಾರ್‌ರವರನ್ನು ಸಂದರ್ಶಿಸಿ ಸೇವಿಸಿದುದರಿಂದ ತಾವು ಪುನೀತರಾದೆವು ಎಂದು ಅಮುದನಾರ್‌ರವರು ಹೇಳಿಕೊಂಡಿದ್ದಾರೆ.

ಗರ್ಭಜನ್ಮಾದಿ ಪಾಪಗಳೆಂಬ ದುಃಖಗಳಿಗೆ ಆವಾಸಸ್ಥಾನವಾಗಿರುವ ತಮ್ಮನ್ನು ದಾಸನನ್ನಾಗಿ ಅನುಗ್ರಹಿಸಿ, ಸ್ವೀಕರಿಸಿದ ರಾಮಾನುಜರ ದಿವ್ಯ ಕಲ್ಯಾಣ ಗುಣಗಳೇ ತಮ್ಮ ಆತ್ಮಕ್ಕೆ ಆಧಾರ ವಾಗಿದೆ, ಇದರಿಂದ ತಮಗೆ ತುಂಬಾ ಆನಂದ ವಾಗಿರುವುದೆಂದೂ ಹೇಳುತ್ತಾರೆ.

'ವೇಣ್ಡಿತ್ತೆಲ್ಲಾ ತರುಮ್' ಅಂದರೆ ಬೇಡಿದ್ದನ್ನೆಲ್ಲಾ ಕೊಡುವವನು ಎಂದು ಸರ್ವೇಶ್ವರ ನನ್ನು ನಮ್ಮಾಳ್ವಾರ್‌ರವರು ಹೊಗಳಿರುವರು. ಅವನಂತಹ ದಯಾಶಾಲಿಯಾದ ರಾಮಾನುಜರು ಮಹಾ ಪ್ರಭಾವಶಾಲಿಗಳೆಂದು ಹೇಳಿರುವರು. ಅವರು ಮಹಾಪಾಪ ಮಾಡಿದ ತಮ್ಮ ಮನಸ್ಸಿನಲ್ಲಿ ಪ್ರವೇಶಿಸಿದರೆಂದು ಹೇಳುತ್ತಾರೆ. ಮತ್ತು ಆಶ್ರಿತರಿಗೆ ಕೃಪೆ ಮಾಡುವ ಅಪ್ರತಿಮರಾದ ರಾಮಾನುಜರ ವೈಭವಕ್ಕೆ ತಮ್ಮಿಂದ ಏನು ದೋಷ ವುಂಟಾಗುವುದೋ ಎಂದು ಅಮುದನಾರ್‌ರವರು ತಪಿಸುತ್ತಾರೆ.

ವಂಚಕರಿಗೆ ದುರ್ಲಭರಾದ ರಾಮಾನುಜಾ-ಚಾರ್ಯರ ಕಲ್ಯಾಣಗುಣಗಳನ್ನು ಬಿಟ್ಟು ತಮ್ಮ ನಾಲಿಗೆಯು ಅನ್ಯವಿಷಯಗಳನ್ನು ಸ್ತೋತ್ರ ಮಾಡುವುದಿಲ್ಲ. ಆದ್ದರಿಂದ ತಮಗೆ ಉಂಟಾದ ಇಂತಹ ಭಾಗ್ಯ ಪುಣ್ಯ ಪುರುಷಾರ್ಥದಿಂದಲೇ ಎಂದು—ಆಶ್ಚರ್ಯಚಕಿತರಾಗುತ್ತಾರೆ.

ರಾಮಾನುಜಾಚಾರ್ಯರು ತಾವಾಗಿಯೇ ಕೂರತ್ತಾಳ್ವಾರ್‌ರವರ ಮೂಲಕ ಬೋಧಿಸಿ ತಮ್ಮನ್ನು ಅವರ ದಾಸರನ್ನಾಗಿ ಸ್ವೀಕರಿಸಿ ಆಳು ತ್ತಿರುವರು. ಇನ್ನು ಮೇಲೆ ಸುಖ ಮತ್ತು ದುಃಖ ಗಳೆಲ್ಲವನ್ನೂ ಸಮವೆಂದೇ ಭಾವಿಸುವುದಾಗಿ ತಮಗೆ ರಾಮಾನುಜರಲ್ಲಿರುವ ಧೃಡಚಿನಿಶ್ಚಲ ಭಕ್ತಿಯನ್ನು ವ್ಯಕ್ತಪಡಿಸುತ್ತಾರೆ.

ಅಮುದನಾರ್‌ರವರಿಗೆ ಬಹಳಷ್ಟು ಸಂತೋಷ ವಾದುದರಿಂದ ತಮ್ಮ ಹರ್ಷವನ್ನು ತಮ್ಮ ಮನಸ್ಸಿಗೇ ಹೇಳಿಕೊಳ್ಳುತ್ತಾರೆ. ಕಲಾ ಮುಹೂರ್ತಾದಿ ಕಾಲಗಳಾದ ಸಂವತ್ಸರ, ತಿಂಗಳು, ದಿನ, ರಾತ್ರಿ, ಹಗಲು, ರಾತ್ರಿ ಈ ರೀತಿ ಎಲ್ಲಾ ಕಾಲಗಳಲ್ಲಿಯೂ ದೇವ ತಿರ್ಯಕ್ ಮನುಷ್ಯಾದಿ ನಾನಾ ದೇಹಗಳನ್ನು ಪ್ರವೇಶಿಸಿ ಅನೇಕ ಜನ್ಮಗಳನ್ನು ತಾಳಿ ತಿರುಗುತ್ತಿದ್ದೆ. ಆಶ್ರಿತರ ಅಭಿಲಾಷೆಗಳನ್ನು ನೆರವೇರಿಸುವ ಕಾಂಚೀಪುರದ ಶ್ರೀ ವರದರಾಜಸ್ವಾಮಿಯನ್ನು ಪೂಜಿಸುವ ಎಂಬೆರುಮಾನಾರ್‌ರವರನ್ನು ಆಶ್ರಯಿಸಿ ಸ್ಥಿರ ವಾಗಿ ನೆಲೆಯಾಗಿ ನಿಂತಿರುವೆನೆಂದು ಸಂತೋಷ ದಿಂದ ತಮ್ಮ ಮನಸ್ಸಿಗೇ ಹೇಳಿಕೊಳ್ಳುತ್ತಾರೆ.

ಅಮುದನಾರ್‌ರವರು ರಾಮಾನುಜಾಚಾರ್ಯ ರನ್ನು ಶ್ರಿಯಃಪತಿಯಾದ ಶ್ರೀಮನ್ ನಾರಾಯಣನಿಗೆ ಹೋಲಿಸುತ್ತಾರೆ.

ಕ್ಷೇಮರೂಪವಾಗಿರುವ ವಿಲಕ್ಷಣವಾದ, ಮೋಕ್ಷವೂ, ಸಂಪತ್ತೂ, ಧರ್ಮವೂ, ಶ್ಲಾಘ್ಯ ವಾದ, ವಿಲಕ್ಷಣರೂಪವಾದ ಭಗವತ್ಸಂಶ್ಲೇಷ ವೆಂಬ ಕಾಮವೂ, – ನಾಲ್ಕು ಪುರುಷಾರ್ಥಗಳು. ಇವುಗಳಲ್ಲಿ ಮುಖ್ಯವಾದುದು, 'ಭಗವತ್ಸಂಶ್ಲೇಷ ವೆಂಬ ಶ್ರೀ ಕೃಷ್ಣಪರಮಾತ್ಮನಲ್ಲಿ ಭಕ್ತಿ ವಿಶೇಷವೇ' ಉಳಿದ ಮೂರೂ ಆ ಕಾಮಕ್ಕೆ ಅಂಗ ಸಾಧನವೆಂದು ರಾಮಾನುಜರು ಉಪದೇಶಿಸಿ 'ಭಕ್ತಿ' ಪುರುಷಾರ್ಥವನ್ನು ಕೊಂಡಾಡಿರುವರು. ಈ ವಿಶೇಷಾರ್ಥಗಳನ್ನು ಶ್ರೀಭಾಷ್ಯಾದಿ ಗ್ರಂಥಗಳ ಮುಖೇನ ಪ್ರಚಾರ ಮಾಡಿರುವರು. ಆದ್ದರಿಂದ ಶ್ರೀಹರಿ ವಾಮನನ ಸ್ವಭಾವ ಇವರಿಗೆ ಸಲ್ಲುತ್ತದೆ ಎಂದು ಅಮುದನಾರ್‌ರವರು ತಿಳಿಸುತ್ತಾರೆ.

ಚೇತನರು ನಮ್ಮಗಳಿಗೆ ಸ್ವಾಮಿಯಾದ ಎಂಬೆರುಮಾನಾರ್‌ರವರು ಅವತರಿಸಿದ ನಂತರ ಅವರ ಉಪದೇಶದಿಂದ 'ಶ್ರಿಯಃಪತಿಯಾದ ಶ್ರೀಮನ್ನಾರಾಯಣನೇ' ಎಲ್ಲಾ ಪ್ರಕಾರದಲ್ಲೂ 'ಶೇಷಿ', ನಾವು ಅವನಿಗೆ 'ಶೇಷಭೂತರು' ಎಂದು ಅವನಿಗೆ ಆಳಾದವರು. ತಿರುಮಂತ್ರದ್ವಯದಲ್ಲಿ ಹೇಳುವ ಅರ್ಥದಲ್ಲಿ ನಿಷ್ಠರಾದವರು ಎಂದು ಅಮುದನಾರ್‌ರವರು ಹೇಳುತ್ತಾರೆ.

ಹೆಂಗಸರುಗಳು ಸರ್ವಾಭರಣಗಳಿಂದ ದೇಹ ವನ್ನು ಅಲಂಕರಿಸಿಕೊಂಡು ತಮ್ಮ ದೇಹ ದೋಷ ಗಳನ್ನು ಹೊರಗೆ ಕಾಣಿಸದಂತೆ ಇದ್ದವರುಗಳಲ್ಲಿ ಪ್ರೀತಿಯಿಂದ ಮಗ್ನರಾಗಿ ಮೋಹವೆಂಬ ಕೆಸರಿ ನಲ್ಲಿ ಮುಳುಗಿ ನಾಶಹೊಂದುತ್ತಿರುವ ತಮ್ಮ ಆತ್ಮ ವನ್ನು ಪರಮಾತ್ಮನೇ ರಕ್ಷಿಸುವನು. ಅವನೇ 'ಶೇಷಿ' ಎಂದು ಉಪದೇಶ ಮಾಡಿದವರು ರಾಮಾನುಜಾಚಾರ್ಯರು. ವಿಷಯಾಂತರಗಳಲ್ಲಿ ಪ್ರವರ್ತಿಸದಂತೆ ನನ್ನನ್ನು ಉದ್ಧಾರಮಾಡಿದರೆಂದು ಹೇಳುತ್ತಾರೆ.

ಧರ್ಮವನ್ನು ದ್ವೇಷಿಸುವ ಸರ್ವಪಾಪಗಳಿಗೂ ಮೂಲವಾದ 'ಹಸಿವು' ಎಂಬ ದುರ್ದೈವವನ್ನು ಓಡಿಸುವ ರಾಮಾನುಜ ಎಂಬ 'ಚತುರಾಕ್ಷರಿ' ಮಂತ್ರವನ್ನು ಹೇಳಿದಾಗ ಕಲಿಯಿಂದಾಗುವ ದುರ್ಮತಿ, ದುಶ್ಚೇಷ್ಟೆಗಳು ನಾಶವಾಗುವುವು ಎಂದು ಅಮುದನಾರ್‌ರವರು ಹೇಳುತ್ತಾರೆ, ಮತ್ತು ಅಂತಹ ರಾಮಾನುಜರ ದಿವ್ಯ ಪಾದ ಗಳೇ 'ಉಪಾಯವು' ಮತ್ತು 'ಉಪೇಯವು' ಎನ್ನುತ್ತಾರೆ.

'ತಿರುವಾಯ್ಮೊಳಿ' ಸಾರಾರ್ಥವು ಮಂದಮತಿ ಯಾದ ತನ್ನ ಮನಸ್ಸಿನಲ್ಲಿ ಹೊಕ್ಕು ಅದರಿಂದ ಜ್ಞಾನೋದಯವಾಗುವಂತೆ ಕರುಣಿಸಿದ ರಾಮಾನುಜಾಚಾರ್ಯರಿಗೆ ಸಾಷ್ಟಾಂಗ ಪ್ರಮಾಣಪೂರ್ವಕವಾಗಿ ನಮಸ್ಕರಿಸಿ ಮಂಗಳಾ ಶಾಸನವನ್ನು ಮಾಡಿ, ಆಶ್ರಯಿಸಿದರೆಂದು ಹೇಳುತ್ತಾರೆ.

ರಾತ್ರಿ ಹಗಲು ತನ್ನ ಮನಸ್ಸಿನಲ್ಲೇ ರಾಮಾನುಜರು ಇರುತ್ತಾರೆ. ಆದ್ದರಿಂದ ತನ್ನಂತಹ ಭಾಗ್ಯಶಾಲಿ ಯಾರೂ ಇಲ್ಲವೆಂದು ಅವರ ಅಸದೃಶವಾದ ವಾತ್ಸಲ್ಯವನ್ನು ಕೊಂಡಾಡುತ್ತಾರೆ. — (ಸಶೇಷ)

## ಪ್ರಕಟನೆ

ತಿರುಮಲೆ ತಿರುಪತಿ ದೇವಸ್ಥಾನಗಳವರು, ತಿರುಮಲೆಗೆ ಹೋಗುವ ಘಾಟ್ ರಸ್ತೆಯಲ್ಲಿ ಕೆಟ್ಟುನಿಂತವಾಹನಗಳ ಅಗತ್ಯ ದುರಸ್ತಿಗಾಗಿ, ಸರಸವಾದ ದರಗಳಲ್ಲಿ ಕೆಲಸಮಾಡುವ ಒಂದು ಸಂಚಾರೀ ದುರಸ್ತಿ ವಾಹನವನ್ನು ಏರ್ಪಾಡು ಮಾಡಿರುತ್ತಾರೆ. ಈ ವಾಹನವು ಎಲ್ಲ ದಿನಗಳಲ್ಲೂ ಬೆಳಗ್ಗೆ 9 ಗಂಟೆಯಿಂದ ಸಂಜೆ 6 ಗಂಟೆಯವರೆಗೆ, ತಿರುಪತಿಯ ಅಲಿಪಿರಿ ಟೋಲ್ ಗೇಟಿನಲ್ಲಿಯಾಗಲೀ ಅಥವಾ ತಿರುಮಲೆಯ ಟೋಲ್‌ಗೇಟಿನಲ್ಲಿಯಾಗಲೀ ದೊರೆಯುವಂತೆ ಏರ್ಪಾಡು ಮಾಡಲಾಗಿದೆ. ಹಾಗಾಗಿ ತಮ್ಮ ವಾಹನಗಳನ್ನು ದುರಸ್ತಿ ಮಾಡಿಸಿಕೊಳ ಬಯಸುವವರು ಮೇಲ್ಕಂಡ ಟೋಲ್‌ಗೇಟ್‌ಗಳಲ್ಲಿನ ಸಿಬ್ಬಂದಿಯನ್ನು ವಿಚಾರಿಸಿ ಈ ಸೇವಾಸದುಪಾಯದ ಅನುಕೂಲ ಪಡೆಯಬಹುದು. —ತಿ. ತಿ. ದೇ.

ಗ್ರಂಥಾಂತರಂಗ

# ಹಿರಿಯರನ್ನೂ ಆಕರ್ಷಿಸುವ
# ಕಿಶೋರ ಭಾರತ

## ಕಿಶೋರ ಭಾರತ

ವೈ. ನ. ನಾಗರಾಜ

ಪುಟ 8+240. ಬೆಲೆ: ರೂ. 4-00

ಪ್ರತಿಗಳಿಗಾಗಿ :

ವೆಲ್‌ಫೇರ್ ಆಫೀಸರ್

ಸೇಲ್ಸ್‌ವಿಂಗ್

ತಿ. ತಿ. ದೇ. ತಿರುಪತಿ.

ಮಹರ್ಷಿ ವೇದವ್ಯಾಸರು ಭಾರತ ಗ್ರಂಥವನ್ನು ರಚಿಸಿ ಮಾನವ ಪ್ರಪಂಚಕ್ಕೇ ವಿಶಿಷ್ಟವಾದ ಉಪಕಾರವನ್ನು ಮಾಡಿದ್ದಾರೆ. ಇದರ ಅನುವಾದಗಳು ಅವತರಣಿಕೆಗಳು, ಸಂಗ್ರಹಗಳು ಹಲವಾರುಭಾಷೆಗಳಲ್ಲಿ ಅನೇಕ ಬಾರಿ ಆಗಿವೆ. ಹಾಗಾಗಿಯೇ ಭಾರತವನ್ನು ತಿಳಿಯದ ಭಾರತೀಯನಿಲ್ಲ ಎಂಬ ಮಾತು. ಕನ್ನಡದಲ್ಲಿಯೂ ಅಷ್ಟೇ.

ಮಹಾಭಾರತದ ವಿಶಾಲ ವೇದಿಕೆಯಲ್ಲಿ ಬರುವ ಪಾತ್ರಗಳು ನೂರಾರು. ಅವುಗಳ ಮನೋಧರ್ಮಗಳು, ಒಳತೋಟಿಗಳು, ಜೀವನೋದ್ದೇಶಗಳು—ಎಲ್ಲವೂ ಪ್ರಾತಿನಿಧಿಕವೆಂಬಂತೆ ಚಿತ್ರಿತವಾಗಿವೆ. ಮಾನವ ಮನವನ್ನು ಮೇಲಕ್ಕೇರಿಸಿ ಸಮಚಿತ್ತವನ್ನುಗಳಿಸಿಕೊಡುವ ವಿಶೇಷ ಪ್ರಯತ್ನವಾಗಿರುವ ಭಗವದ್ಗೀತೆಯ ಪ್ರಶಸ್ತಿಯ ಮಾತು 'ಸರ್ವೋಪನಿಷದೋ ಗಾವಃ - ಈ ಪ್ರಾತಿನಿಧ್ಯವನ್ನು, ಮಾನವಪಾರ್ಥತ್ವವನ್ನು ಸ್ಪಷ್ಟಪಡಿಸುವಂತಹುದು.

ಶ್ರೀ ವೈ.ನ. ನಾಗರಾಜ ಅವರು ಇಂತಹ ಮೌಲಿಕ ವಿಚಾರಗಳನ್ನು ಕನ್ನಡದ ಕಿರಿಯರಿಗಾಗಿ ನೀಡಲು ಕಿಶೋರ ಭಾರತ ಎಂಬ ಹೆಸರಿನಲ್ಲಿ ಮಹಾಭಾರತವನ್ನು ಸಂಗ್ರಹಿಸಿದ್ದಾರೆ. ಕಥೆ ಹೇಳುವುದರಲ್ಲಿ ಸಿದ್ಧಹಸ್ತರು ಅವರು. ಮಕ್ಕಳು ಕಥೆಯ ಬಗ್ಗೆ ಹೊಂದಿರುವ ಆಸಕ್ತಿಯ ರಹಸ್ಯವನ್ನು ತಿಳಿದವರು. ಕಥೆಯನ್ನು ಹೇಳುತ್ತಲೇ ಧರ್ಮ, ನೀತಿ, ತತ್ತ್ವಗಳನ್ನು ಆವೇಶವಿಲ್ಲದೆ, ಆಡಂಬರವಿಲ್ಲದೆ ಹೇಳುವುದು ಮಹರ್ಷಿ ವೇದವ್ಯಾಸರ ಕೊಡುಗೆಯೇ ಆದರೂ ಅದನ್ನು ಬಹು ಸಮರ್ಪಕವಾಗಿ ಅನುಸರಿಸಿದ್ದಾರೆ.

ಪ್ರೊ|| ಕೆ. ಟಿ. ಪಾಂಡುರಂಗಿ ಅವರು ಕಿಶೋರ ಭಾರತದ ಬಗ್ಗೆ ಬರೆಯುತ್ತ "ಶ್ರೀ ವೈ. ನ. ನಾಗರಾಜ ಅವರು ತಮ್ಮ ಎಳೆಯರ ರಾಮಾಯಣ ಕೃತಿಯಿಂದ ಈಗಾಗಲೇ ಎಳೆಯರಿಗೆ ಪರಿಚಿತರಾಗಿದ್ದಾರೆ. ಎಳೆಯರಿಗಾಗಿ ಬರೆದ ಈ ಗ್ರಂಥದಲ್ಲಿ ಮುಖ್ಯ ಕಥೆಯನ್ನೂ ಉಪಕಥೆಗಳನ್ನೂ ಸುಲಭವಾದ ಶೈಲಿಯಲ್ಲಿ ಯಾವ ಮುಖ್ಯಾಂಶವನ್ನೂ ಬಿಡದೆ ನಿರೂಪಿಸಲಾಗಿದೆ. ಕಥೆಯನ್ನು ಪ್ರತ್ಯಕ್ಷವಾಗಿಯೂ ನೀತಿ ಬೋಧೆಯನ್ನು ಅಪ್ರತ್ಯಕ್ಷವಾಗಿಯೂ ಅಳವಡಿಸಲಾಗಿದೆ. ಯಕ್ಷಪ್ರಶ್ನೆ, ಧರ್ಮವ್ಯಾಧನ ಕಥೆ ಯಂತಹ ಸಂವಾದಗಳನ್ನು ಸಂವಾದ ರೂಪದಲ್ಲಿಯೇ ಸುಂದರವಾಗಿ ನಿರೂಪಿಸಲಾಗಿದೆ. ಗ್ರಂಥವು ಎಳೆಯರಿಗಾಗಿ ಬರೆಯಲ್ಪಟ್ಟಿದ್ದರೂ, ಈ ವರೆಗೆ ಮಹಾಭಾರತವನ್ನು ಆಮೂಲಾಗ್ರವಾಗಿ ಓದದೇ ಇದ್ದ ಪ್ರೌಢರಿಗೂ ಉಪಯುಕ್ತವಾಗಿದೆ. ಭಾರತೀಯ ಸಂಸ್ಕೃತಿಯ ಮೌಲ್ಯಗಳನ್ನು ಅರಿತು ಭಾರತೀಯರಾಗಿ, ಬಾಳ ಬೇಕೆನ್ನುವವರಿಗೆ ಈ ಗ್ರಂಥವು ತುಂಬ ಸಹಾಯಕವಾಗಿದೆ." ಎಂದು ಹೇಳುತ್ತಾರೆ.

ಮೊದಲಿಗೆ ಜಯವೆಂಬ ಈ ಕೃತಿ 'ವ್ಯಾಸಮುನೀಂದ್ರ ರುಂದ್ರ ವಚನಾಮೃತವಾರ್ಧಿ'. ಇದನ್ನು ಈಸುವೆನೆಂಬುದು—ಸಂಗ್ರಹಿಸುವೆನೆಂಬುದು ಕವಿತಾಗುಣಾರ್ಣವನಿಗೆ ಮಾತ್ರವೇ ಸಾಧ್ಯ ಆದದ್ದು ಎಂಬುದೂ, ಕನ್ನಡಕ್ಕೆ ಭಟ್ಟಿಯಿಳಿಸುವ ಕಾರ್ಯ ಶುಕರೂಪಿ ಕುಮಾರ ವ್ಯಾಸನಿಗೆ ಮೀಸಲೆಂಬುದೂ, ಇದ್ದರೂ ಕಿಶೋರಭಾರತ ಅವೆರಡಕ್ಕಿಂತ ಸರಳ, 'ಕರಿಯ ಕನ್ನಡಿಯೊಳು ಕಂಡಂತೆ.' ಉತ್ತಂಕನ ಕಥೆ, ಸಾವಿತ್ರಿಯ ಕಥೆ, ಗರುಡನ ಕಥೆ, ನಳ ದಮಯಂತಿ, ಮುಂತಾದ ಮಹಾಭಾರತದ ಮುಖ್ಯ ಪರಿಧಿಯ ಹೊರಗಣ ಕಥೆಗಳೂ, ಏಕಲವ್ಯನ ಕಥೆ, ಸ್ವರ್ಗಾರೋಹಣದ ಕಥೆ ಮೊದಲಾದ ನೇರ ಸಂಬಂಧಿ ಕಥೆಗಳೂ ಇಲ್ಲಿ ಯಶಸ್ವಿಯಾಗಿ ಸಂಗ್ರಹಿತವಾಗಿವೆ ಎಂಬುದೊಂದು ವಿಶೇಷ.

ಅತಿ ಸಂಗ್ರಹ ದೋಷವಿಲ್ಲದೆ ಎಲ್ಲ ನೀತಿ, ಧರ್ಮಬೋಧೆಗಳನ್ನೂ ಸಂಗ್ರಹಿಸಿರುವುದು ಶ್ರೀ ವೈ. ನ. ನಾಗರಾಜ ಅವರಲ್ಲಿನ ಇನ್ನೊಂದು ವಿಶೇಷ.

240 ಪುಟಗಳಲ್ಲಿ ಹರಡಿದ ಕಿಶೋರಭಾರತದಲ್ಲಿ ಮಕ್ಕಳಿಗಾಗಿ ಸುಲಭಗ್ರಾಹ್ಯವಾಗುವಂತೆ ಹಲವಾರು ಸಂದರ್ಭೋಚಿತ ಚಿತ್ರಗಳೂ ಇವೆ. ಜೊತೆಗೆ ಮಹಾಭಾರತ ವಿಶ್ಲೇಷಣೆಯ ರೂಪದ ನಾಲ್ಕು ನಲ್ನುಡಿ ಪ್ರೊ|| ಕೆ.ಟಿ. ಪಾಂಡುರಂಗಿ ಅವರಿಂದ.

ಕರ್ನಾಟಕದಲ್ಲಿ ವಿಶ್ವಹಿಂದೂ ಪರಿಷತ್ತಿನ ಪುರಾಣ ಪರಿಚಯ ಪರೀಕ್ಷೆಗಳಲ್ಲಿ ಪಠ್ಯವಾಗುವುದರ ಮೂಲಕ ಕಿಶೋರಭಾರತ ಈಗಾಗಲೇ ಅನೇಕಬಾರಿ ಪುನಮುದ್ರಣ ಯೋಗವನ್ನು ಕಂಡು ದಿನೇ ದಿನೇ ವಿದ್ಯಾರ್ಥಿಗಳಲ್ಲಿ ಹೆಚ್ಚು ಜನಪ್ರಿಯವಾಗುತ್ತಿದೆ.

ಕಾಗದ, ಮುದ್ರಣ ವೆಚ್ಚಗಳ ಉಬ್ಬರದ ಈ ಕಾಲದಲ್ಲೂ 250 ಪುಟಗಳ ಕಿಶೋರಭಾರತದ ಬೆಲೆ ಕೇವಲ ನಾಲ್ಕು ರೂಪಾಯಿ ಮಾತ್ರ ಎಂದರೆ ಅದಕ್ಕೆ ಕಾರಣ ಇದು ಕನ್ನಡಿಗರಿಗೆ ಶ್ರೀ ವೆಂಕಟೇಶ್ವರಸ್ವಾಮಿಯವತಿಯಿಂದ ಬಳುವಳಿಯ ರೂಪದಲ್ಲಿ ಬಂದಿರುವುದೇ ಆಗಿದೆ.



(16ನೇ ಪುಟದಿಂದ)

ಆಶ್ಚರ್ಯಾವಹ ಲೀಲೆಯನ್ನೂ ಹಾಡಿ ಹೊಗಳಲು ಆರಂಭಿಸಿದರು.

ಉಲ್ಲಂಘಿತ ತ್ರಿವಿಧಸೀಮ ಸಮಾತಿಶಾಯಿ
ಸಂಭಾವನಂ ತವ ಪರಿಬ್ರಢಿಮಸ್ವಭಾವಂ ।
ಮಾಯಾಬಲೇನ ಭವತಾಪಿ ನಿಗೂಹ್ಯಮಾನಂ
ಪಶ್ಯಂತಿ ಕೇಚಿ ದನಿಶಂ ತ್ವದನನ್ಯಭಾವಾಃ ॥

ಯದಂಡಮಂಡಾಂತರ ಗೋಚರಂ ಚ
ಯದ್ದಶೋತ್ತರಾಣ್ಯಾವರಣಾನಿ ಯಾನಿ ಚ ।
ಗುಣಾಃ ಪ್ರಧಾನಂ ಪುರುಷಂ ಪರಂಪದಂ
ಪರಾತ್ಪರಂ ಬ್ರಹ್ಮ ಚ ತೇ ವಿಭೂತಯಃ ॥

ಬಲಿಯು ಮಾಡುತ್ತಿದ್ದ ಕೊನೆಯ ಯಾಗ, ಅದರಲ್ಲಿ ಪೂರ್ಣಾಹುತಿ ವೇಳೆಯಲ್ಲಿ ಕಾಣಿಸಿಕೊಳ್ಳಬೇಕಾದ ಪರಮಪುರುಷ ಆವೇಳೆಯಲ್ಲಿ ಕಾಣಿಸಿಕೊಂಡ. ಕೊನೇಯಾಗ ಹಾಗೆಯೇ ನಿಂತು ಹೋಯಿತು. ಪರಮಪುರುಷನ ಪಾದ ಬಲಿಯ ತಲೆಯ ಮೇಲಿದ್ದಾಗ ಅವನ ಮಡದಿ ವಿಂಧ್ಯಾವಳಿಯು ಭಗವಂತನ ಇನ್ನೊಂದು ಪಾದದ ಬಳಿ ನತಶಿರಳಾಗಿ "ಭಗವನ್ ತ್ರಾಹಿ, ಭಗವನ್ ತ್ರಾಹಿ" ಎಂದು ಬೇಡಿಕೊಂಡಳು. ಶುಕ್ರಾಚಾರ್ಯರು ಯಾಗ ಮುಗಿಯದೇ ತನ್ನ ರಾಜನಿಗೆ ಶತಕ್ರತುಪದವಿ ತಪ್ಪಿತಲ್ಲಾ ಎಂದು ಚಿಂತಾಕ್ರಾಂತರಾಗಿ ನಿಂತಿದ್ದರು. ದಾನಕೊಟ್ಟಮೇಲೆ ಅದನ್ನು ಯಾವ ವಿಧದಲ್ಲೂ ಹಿಂದಕ್ಕೆ ಪಡೆಯಲೂ ಬಾರದಲ್ಲಾ ಎಂದು ತಪಿಸಿದರು. ಆ ವೇಳೆಗೆ ಸರಿಯಾಗಿ ಪ್ರಹ್ಲಾದನೂ ಅಲ್ಲಿಗೆ ಆಗಮಿಸಿ, ಶ್ರೀಹರಿಯ ತ್ರಿವಿಕ್ರಮ ರೂಪವನ್ನು ಸಂದರ್ಶಿಸಿ ಹಾಡಿ ಹೊಗಳಲು ಆರಂಭಿಸಿದನು. ಭಗವಂತನು ಬಲಿಗೆ ಆಶ್ವಾಸನೆ ನೀಡಿ ಅವನ ಉತ್ತಮ ಕಾರ್ಯಕ್ಕಾಗಿ ಅವನು ಚಿರಂಜೀವಿಯಾಗಿ ಸಕಲ ಲೋಕದಲ್ಲಿ ನೆಲಸುವಂತೆಯೂ, ಅವನಿಗೆ ಮುಂದಿನ ಕಲ್ಪದಲ್ಲಿ ಇಂದ್ರಪದವಿಯನ್ನು ತಾನೇ ಅನುಗ್ರಹಿಸುವುದಾಗಿಯೂ ಅಭಿವಚನವಿತ್ತನು. ಅಷ್ಟೇ ಸಾಲದೆಂಬಂತೆ ಅವನಿಗೆ ಸುತಲಲೋಕದಲ್ಲಿ ತನ್ನ ನಿತ್ಯ ದರ್ಶನ ಕೊಡುವುದಾಗಿ ಹೇಳಿ ಗದಾಧರ ರೂಪಿಯಾಗಿ ಅವನ ಬಾಗಿಲು ಕಾಯುತ್ತಾ ನಿಂತನು. ಹೀಗೆ ಶ್ರೀಹರಿಯ ಪಾದವು ಬಲಿಯ ಮೆಟ್ಟಿದ ಪಾದವಾಯಿತು. ಅವನ ನಿತ್ಯವಾಸ ಬಲಿಗೆ ರಕ್ಷಕವಾಯಿತು. ಶ್ರೀಹರಿಯು ವರ್ಷಕ್ಕೊಮ್ಮೆ ಬಲಿಯನ್ನು ತನ್ನ ಭೂಚಕ್ರಾಧಿಪತ್ಯವನ್ನು ನೋಡಲೆಂಬಂತೆ ಭೂಮಿಗೆ ಕರೆತಂದು ತಾನು ಅವನ ಅಂಗರಕ್ಷಕನಂತೆ ವಿಹರಿಸುತ್ತಾನೆ. ಇವರ ಪೂಜೆಗೋಸ್ಕರವೇ ಜನರೆಲ್ಲರೂ ದೀಪಾವಳಿಯನ್ನು ಆಚರಿಸಿ ಬಲಿಪಾಡ್ಯಮಿಯಿಂದ ವಿಷ್ಣುದೀಪೋತ್ಸವದವರಿಗೂ ರಾತ್ರಿವೇಳೆಯಲ್ಲಿ ದೀಪಾಲಂಕಾರದಿಂದ ಬೆಳಗೆ ವಿಶೇಷ ಪೂಜೆಗಳನ್ನು ಆಚರಿಸುತ್ತಾರೆ.

ಹೀಗೆ ಬಲಿಯನ್ನು ಉದ್ಧರಿಸಿದ ಭಗವಂತನು ದೇವೇಂದ್ರನಿಗೆ ತಾನು ಯಾಚಿಸಿ ತಂದಿದ್ದ ತ್ರಿಲೋಕಾಧಿಪತ್ಯವನ್ನು ವಹಿಸಿ ತಾನು ಉಪೇಂದ್ರನಾಗಿ ಇಂದ್ರಾವರಜನೆನಿಸಿ ಅದಿತಿಗೂ ದೇವತೆಗಳಿಗೂ ಕೊಟ್ಟ ಮಾತನ್ನು ನಡೆಸಿಕೊಟ್ಟನು. ಪ್ರಹ್ಲಾದನಂತೂ ಭಗವಂತನ ಲೀಲಾಚೇಷ್ಟೆಗಳಿಂದ ವಿಸ್ಮಿತನಾಗಿ ತುಂಬಿದ ಭಾವನೆಯಿಂದ ಹೇಳಿದ್ದು

ತದಹಂ ತ್ವದೃತೇನ ನಾಥವಾ
ನ್ಮದೃತೇ ತ್ವಂ ದಯನೀಯವಾನ್ನ ಚ ।
ವಿಧಿನಿರ್ಮಿತಮೇತದನ್ವಯಂ
ಭಗವನ್ಪಾಲಯ ಮಾ ಸ್ಮ ಜೀಹಪಃ ॥

ವಾಙ್ಮನಸಾ ಅಗೋಚರನೂ ತಿಳಿಯಲಸಾಧ್ಯನೂ ಆದ ಮತ್ತು ವಿಶ್ವವಿಭೂತಿನಾಥನೂ ದಯಾಸಿಂಧುವೂ ಆದ ಭಗವಂತನನ್ನು ನಮಿಸಿ ಪರಮಾತ್ಮನಿಗೂ ಜೀವಾತ್ಮನಿಗೂ ಇರುವ ಶೇಷಶೇಷೀಭಾವವನ್ನು ಅಂಕೆಮಾಡಿ ಅವನ ರಕ್ಷೆಯನ್ನು ಕೋರಿದನು.

ನಮೋ ನಮೋ ವಾಙ್ಮನಸಾತಿಭೂಮಯೇ
ನಮೋ ನಮೋ ವಾಙ್ಮನಸೈಕಭೂಮಯೇ ।
ನಮೋ ನಮೋಽನಂತ ಮಹಾವಿಭೂತಯೇ
ನಮೋ ನಮೋಽನಂತದಯೈಕಸಿಂಧವೇ ॥



# ಆರ್ಜಿತ ಅಭಿಷೇಕ

# ಶ್ರೀ ವೆಂಕಟೇಶ್ವರಸ್ವಾಮಿ ದೇವಸ್ಥಾನ, ಮಂಗಾಪುರ

## ಆರ್ಜಿತ ಅಭಿಷೇಕಾಸಕ್ತರಿಗೆ ಹೊಸ ಅವಕಾಶ

ಮಂಗಾಪುರದ ಶ್ರೀ ವೆಂಕಟೇಶ್ವರಸ್ವಾಮಿ ದೇವಸ್ಥಾನದಲ್ಲಿ ಮೂಲ ಮೂರ್ತಿಗೆ ಪ್ರತಿ ಶುಕ್ರವಾರವೂ ಸರ್ಕಾರ್ ಆರ್ಜಿತ ಅಭಿಷೇಕವನ್ನು ಏರ್ಪಡಿಸಲು ಯೋಜಿಸಲಾಗಿದೆ. ರೂ. 100/–ಗಳ ಟಿಕೆಟ್ಟನ್ನು ಪಡೆದ ಇಬ್ಬರಿಗೆ ಹಾಲಿನ ತಂಬಿಗೆಗಳೊಂದಿಗೆ ವಿಮಾನ ಪ್ರಾಕಾರದಲ್ಲಿ ಪ್ರದಕ್ಷಿಣೆಗೂ ಅಭಿಷೇಕ ದರ್ಶನಕ್ಕೂ ಅವಕಾಶ ನೀಡಲಾಗುತ್ತದೆ, ಆಸ್ತಿಕ ಭಕ್ತರು ಈ ಅವಕಾಶವನ್ನು ಬಳಸಿಕೊಂಡು ಕೃತಾರ್ಥರಾಗಬೇಕಾಗಿ ವಿನಂತಿ.

# ಸೂಚನೆ.

ಶ್ರೀ ವೆಂಕಟೇಶ್ವರಸ್ವಾಮಿಯವರ ಹುಂಡಿಗೆ ಕಾಣಿಕೆಗಳನ್ನು ಕಳುಹಿಸುವ ಭಕ್ತಾದಿಗಳು "ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇ., ತಿರುಪತಿ" ಇವರ ಖಾತೆಯ ಹೆಸರಿಗೆ ಮಾತ್ರವೇ ಬ್ಯಾಂಕ್ ಡ್ರಾಫ್ಟ್ ಕಳುಹಿಸಬೇಕೆಂದು ಈ ಮೂಲಕ ಸೂಚಿಸಲಾಗಿದೆ.

**ತಿ. ತಿ. ದೇ.**

(14ನೇ ಪುಟದಿಂದ)

ಸುತ್ತಾರೆ. ಬೇರೊಂದು ಪ್ರಮಾಣದ ಪ್ರಕಾರ ಶಿವನೇ ವಸುಗುಪ್ತನಿಗೆ ಸ್ವಪ್ನದಲ್ಲಿ ಕಾಣಿಸಿಕೊಂಡು ಶಿವಸೂತ್ರಗಳನ್ನು ಉಪದೇಶಿಸಿದನೆಂದೂ ಅದನ್ನೇ ಅವನು ಶಿಷ್ಯರಲ್ಲಿ ಪ್ರಚಾರಮಾಡಿದನೆಂದೂ ತಿಳಿದುಬರುತ್ತದೆ. ಹೇಗಾದರೂ ಶಿವಸೂತ್ರಗಳೇ ಈ ಪಂಥದ ಮೂಲ ಮತ್ತು ವಸುಗುಪ್ತರೇ ಪರಮಾಚಾರ್ಯರು.

ವಸುಗುಪ್ತರು ಶಿವಸೂತ್ರಗಳನ್ನು ಕಲ್ಲಟರಿಗೆ ಉಪದೇಶಿಸಿದರು. ವಸುಗುಪ್ತರ ಗ್ರಂಥಕ್ಕೆ 'ಸ್ಪಂದಕಾರಿಕೆ' ಎಂದು ಹೆಸರು. ಕಲ್ಲಟರ ಸ್ಪಂದ ಸರ್ವಸ್ವ–ಇದರ ವ್ಯಾಖ್ಯಾನ. ಉತ್ಪಲದೇವನ 'ಸ್ಪಂದಪ್ರದೀಪಿಕಾ', ಕ್ಷೇಮ ರಾಜನ 'ಸ್ಪಂದ ನಿರ್ಣಯ'. ಇವು ಈ ಶಾಖೆಯ ಇತರ ಮುಖ್ಯಗ್ರಂಥಗಳು.

ಪ್ರತ್ಯಭಿಜ್ಞಾ ಶಾಖೆಯ ತತ್ತ್ವಗಳು ಮೊದಲಸಲ ಸೋಮಾನಂದನಿಂದ ಕ್ರಿ.ಶ. ೮೫೦ ರಲ್ಲಿ 'ಶಿವದೃಷ್ಟಿ' ಎಂಬ ಗ್ರಂಥದಲ್ಲಿ ಪ್ರತಿಪಾದಿತವಾದುವು. ಸ್ಪಂದಶಾಖೆಯ ಉತ್ಪಲದೇವನಿಗಿಂತ ಭಿನ್ನವಾದ ಮತ್ತೊಬ್ಬ ಉತ್ಪಲದೇವನು (೧೦ ನೆಯ ಶತಮಾನ) 'ಈಶ್ವರಸಿದ್ಧಿ' ಎಂಬ ಹೆಸರಿನ ಸ್ವವೃತ್ತಿ ಸಹಿತವಾಗಿ 'ಈಶ್ವರಪ್ರತ್ಯಭಿಜ್ಞಾ ಕಾರಿಕಾ' ಮೊದಲಾದ ಇತರ ಗ್ರಂಥಗಳನ್ನೂ ರಚಿಸಿದನು...'ಧ್ವನ್ಯಾಲೋಕ ಲೋಚನ' ಕರ್ತೃವಾದ ಅಭಿನವಗುಪ್ತಾಚಾರ್ಯನು ಈ ಶಾಖೆಯ ಉದ್ದಾಮಪಂಡಿತ. ಆತನ 'ಬೋಧಪಂಚಾಶಿಕಾ', 'ಮಾಲಿನೀ ವಿಜಯ ವಾರ್ತಿಕಾ' 'ಪರಾತ್ರಿಂಶಿಕಾವಿವರಣ', 'ತಂತ್ರಾಲೋಕ', 'ತಂತ್ರಸಾರ' ಮೊದಲಾದುವುಗಳಿಂದ ತಾಂತ್ರಿಕಗ್ರಂಥರಾಶಿ ಅಭಿವೃದ್ಧಿಯಾಯಿತು. ಅವನ 'ಭಗವದ್ಗೀತಾರ್ಥ ಸಂಗ್ರಹ'ವು 'ಭಗವದ್ಗೀತೆ'ಯ ಶೈವಪರವಾದ ವ್ಯಾಖ್ಯಾನ. ಆತನ 'ಪರಮಾರ್ಥ ಸಾರ'ವು ಶೈವದೃಷ್ಟಿಯಿಂದ ಸಾಂಖ್ಯತತ್ತ್ವಗಳನ್ನು ವಿವರಿಸುತ್ತದೆ. ಇದರಲ್ಲಿ ಅಭಿನವ ಗುಪ್ತನು ಅದ್ವೈತದ ಏಕತತ್ತ್ವದ ವಾದವನ್ನು ಶೈವ-ವೈಷ್ಣವಪಂಥದ ಯೋಗಭಕ್ತಿ ತತ್ತ್ವಗಳನ್ನೂ ಸಮನ್ವಯಮಾಡಿ ಹೊಸ ಮಾರ್ಗವನ್ನು ಸ್ಥಾಪಿಸಿದ್ದಾನೆ. ಆತನು ಉತ್ಪಲದೇವನ 'ಈಶ್ವರ ಪ್ರತ್ಯಭಿಜ್ಞಾ'ಕಾರಿಕೆಗೆ 'ಈಶ್ವರ ಪ್ರತ್ಯಭಿಜ್ಞಾವೃತ್ತಿ ವಿಮರ್ಶಿನಿ' ಎಂಬ ವ್ಯಾಖ್ಯಾನವನ್ನು ರಚಿಸಿದ್ದಾನೆ. ಆತನ 'ಅನುತ್ತರಾಷ್ಟಿಕಾ', 'ಪರಮಾರ್ಥ ದ್ವಾದಶಿಕಾ', 'ಪರಮಾರ್ಥ ಚರ್ಚಾ' ಮನೋಪದೇಶ ವಿಂಶತಿಕಾ'–ಎಂಬುವು ಶೈವ ಸಿದ್ಧಾಂತ ವಿಷಯಕವಾದುವು. ಸೋಮಾನಂದನ 'ಶಿವದೃಷ್ಟಿ'ಯ ವ್ಯಾಖ್ಯಾನಗಳಾದ 'ಶಿವದೃಷ್ಟ್ಯಾಲೋಚನ ಪ್ರಕೀರ್ಣ ವಿವರಣ' ಮೊದಲಾದುವು ನಷ್ಟವಾಗಿವೆ. ಅನುವಾದಗಳಿಂದ ಮಾತ್ರ ಪರಿಚಿತವಾಗಿವೆ.

---

# ಶ್ರೀ ಪದ್ಮಾವತೀ ದೇವಾಲಯ



## ಆರ್ಜಿತ ಅಭಿಷೇಕ

ತಿರುಚಾನೂರಿನಲ್ಲಿನ ಶ್ರೀ ಪದ್ಮಾವತೀದೇವಿಯವರಿಗೆ ಪ್ರತಿ ಶುಕ್ರವಾರವೂ ಆರ್ಜಿತ ಅಭಿಷೇಕ ಸೇವೆ ಏರ್ಪಾಟು ಮಾಡಲಾಗಿದೆ. ಟಿಕೆಟ್ಟಿಗೆ ರೂ. 100/- ಸಲ್ಲಿಸಿ ಗೃಹಸ್ಥರು ಭಾಗವಹಿಸಬಹುದು. ಗೃಹಸ್ಥರು, ಅವರ ಸಂಬಂಧೀಕರು ಒಟ್ಟು ಇಬ್ಬರು ಕ್ಷೀರ ಪಾತ್ರೆಗಳನ್ನು ಆಲಯದಲ್ಲಿ ಮೆರವಣಿಗೆಯಲ್ಲಿ ಕೊಂಡು ಹೋಗಲು ಅನುಮತಿಸಲ್ಪಡುವರು. ಅನಂತರ ಅವರು ಅಭಿಷೇಕ ದರ್ಶನ ಮಾಡಬಹುದು. ಆದರೆ ಪ್ರಸಾದಮಾತ್ರ ಕೊಡಲ್ಪಡುವುದಿಲ್ಲ. ಭಕ್ತರು ಈ ಸದವಕಾಶವನ್ನು ಉಪಯೋಗಿಸಿಕೊಳ್ಳಬಹುದು.

# ಮಲಯಾಳ ಭಾಷೆಯ
# ರಾಮಾಯಣಗಳು

ಎ. ಎಂ. ದೇವಿ

ರಾಮಾಯಣ, ಮಹಾಭಾರತ ಮತ್ತು ಭಾಗವತಗಳು ಭಾರತೀಯ ಸಾಹಿತ್ಯದ ಮೇಲೆ ಬೀರಿರುವ ಪ್ರಭಾವ ಅಪಾರವಾದುದು. ಭಾರತೀಯ ಸಾಹಿತ್ಯದ ವಿವಿಧ ಭಾಷಾಕವಿಗಳು ಹಲವು ವಸ್ತುಗಳನ್ನು ಸ್ವೀಕರಿಸಿದ್ದರೂ ಅವರಲ್ಲಿ ಅನೇಕರು ಮೇಲಿನ ಕಾವ್ಯ ತ್ರಿವೇಣಿಗೆ ಋಣಿಗಳಾಗಿದ್ದಾರೆ. ರಾಮಾಯಣವಂತೂ ಭಾರತದ ಹೊರಗೂ ಜನಪ್ರಿಯವಾಗಿ ಅನೇಕ ಕಾವ್ಯ ಪ್ರಕಾರಗಳ ರೂಪ ಪಡೆದಿದೆ. ರಾಮಾಯಣದ ವಸ್ತುವನ್ನು ಸ್ವೀಕರಿಸಿ ಕಾವ್ಯ ರಚಿಸಿದ ಬೇರೆ ಬೇರೆ ಭಾಷೆಗಳ ಕವಿಗಳು ಸ್ವತಂತ್ರ ಮಹಾಕಾವ್ಯಗಳೇನೋ ಎನ್ನುವಂತೆ ಆ ಕಥೆಯನ್ನು ಪುನರ್ನಿರ್ಮಿಸಿದ್ದಾರೆ.

ದ್ರಾವಿಡ ಭಾಷೆಗಳಲ್ಲಿ ಒಂದಾದ ಮಲಯಾಳವೂ ಇದಕ್ಕೆ ಹೊರತಾದುದಲ್ಲ. ಮಲಯಾಳದಲ್ಲಿ ದೊರೆತಿರುವ ಮೊದಲ ಕೃತಿ 'ರಾಮಚರಿತಂ'. ಇದರ ಕರ್ತೃ ಚೀರಾಮನ್. ಇವನ ಕಾಲ 12 ನೆಯ ಶತಮಾನದ ಕೊನೆ ಅಥವಾ 13 ನೆಯ ಶತಮಾನದ ಆದಿ ಎನ್ನಬಹುದು. ಈತ ಸಂಸ್ಕೃತ, ತಮಿಳು, ಮಲಯಾಳಂ ಬಲ್ಲಂಥವನು. ಪಾಟ್ಟು ಛಂದಸ್ಸಿನಲ್ಲಿ ರಾಮಚರಿತಂ ಬರೆದಿದ್ದಾನೆ ಈ ಕವಿ.

'ರಾಮಚರಿತಂ'ದ ವಸ್ತು ರಾಮಾಯಣದ ಯುದ್ಧಕಾಂಡ. ಸೈನಿಕರನ್ನು ಉತ್ತೇಜಿಸಲು ರಾಮನ ಸಾಹಸ ಕಾರ್ಯಗಳನ್ನೇ ವಸ್ತುವಾಗುಳ್ಳ ವೀರರಸಪ್ರಧಾನವಾದ ಈ ಭಾಗವನ್ನು ಕವಿ ಆರಿಸಿಕೊಂಡಿದ್ದಾನೆ. ಈತ ವಾಲ್ಮೀಕಿ ರಾಮಾಯಣವನ್ನು ಅನುವಾದಿಸಿದ್ದಾನೆ. ಇದು ವಾಲ್ಮೀಕಿ ರಾಮಾಯಣದ ಕೇವಲ ಅನುವಾದವಲ್ಲ. ಕವಿ ತನ್ನ ಪ್ರತಿಭೆ ಪಾಂಡಿತ್ಯಗಳಿಂದ ಕೃತಿಯಲ್ಲಿ ಸ್ವಂತಿಕೆಯನ್ನು ತಂದಿದ್ದಾನೆ. ಈತ ಬಳಸಿರುವ ಉಪಮೆಗಳು, ಅಲಂಕಾರಗಳು ಬಹು ಸುಂದರವಾಗಿವೆ. ಅಂತಹ ಒಂದೆರಡು ಉದಾಹರಣೆಗಳನ್ನು ನೋಡೋಣ.

ರಾವಣನ ಸೈನ್ಯಕ್ಕೆ ಕಪಿಗಳು ಮುತ್ತಿದ ರೀತಿಯನ್ನು ವಿವರಿಸುತ್ತಾ ಅವುಗಳ ಧ್ವನಿ 'ಸಮುದ್ರದ ಮೊರೆತದಂತಿತ್ತು'ಎನ್ನುತ್ತಾನೆ. ಲಕ್ಷ್ಮಣನ ಬಾಣ ಎಂಟು ದಿನದ ಚಂದ್ರನಂತಿತ್ತಂತೆ! ರಾವಣನ ವಧೆಯ ಅನಂತರ ಅಗ್ನಿಪರೀಕ್ಷೆಯಾದ ಸೀತೆ ರಾಮನ ಬಳಿ ಬರುವ ದೃಶ್ಯ,

"...ಕಂಬನಿ ತುಂಬಿದ ನೀಲಲೋಚನಗಳ, ಬಾಗಿದ ಮುಖ ಕಮಲವುಳ್ಳ, ಹಾರಗಳಿಂದ ಮುಸುಕಲ್ಪಟ್ಟ ವಕ್ಷಸ್ಥಳವುಳ್ಳ, ಕಾರ್ಮೋಡದಂತೆ ಕಪ್ಪಾದ ತಲೆಗೂದಲು ಮತ್ತು ಉಡುಪುಗಳುಳ್ಳ, ಪುಷ್ಪಾಲಂಕೃತಳಾಗಿ ಕೈಕಟ್ಟಿಕೊಂಡಿದ್ದ ಜಾನಕಿ ಸ್ತ್ರೀಸಹಜವಾದ ಲಜ್ಜೆಯಿಂದ...ಲತೆಯಂತೆ ಬಳುಕುತ್ತ, ಮೆಲ್ಲಡಿಗಳನ್ನಿಡುತ್ತ .... ತನ್ನರಸನನ್ನು ಸಮೀಪಿಸಿ ಅವನ ಎಡಭಾಗದಲ್ಲಿ ನಿಂತಳು".

ಮಲಯಾಳ ಸಾಹಿತ್ಯದ ರಾಮಾಯಣಗಳಲ್ಲಿ ಮೊದಲಕೃತಿಯಾಗಿ ಅನಂತರಕಾಲದ ಕಾವ್ಯಗಳ ಮೇಲೆ ಈ ಕೃತಿ ಸಾಕಷ್ಟು ಪ್ರಭಾವ ಬೀರಿದೆ.

14 ನೆಯ ಶತಮಾನದ ಕಡೆಯಲ್ಲೂ 15 ನೆಯ ಶತಮಾನದ ಆದಿಯಲ್ಲೂ ಇದ್ದ ಕಣ್ಣಶ ಕವಿಗಳಲ್ಲಿ ರಾಮಪಣಿಕ್ಕರನ ರಾಮಾಯಣ ವಿಶಿಷ್ಟವಾದುದು. ಭಾಷೆಯ ಪ್ರಾಚೀನತೆ, ಪ್ರಾಚೀನ ವೃತ್ತಲಕ್ಷಣಗಳು ಇಲ್ಲದಿದ್ದರೆ ರಾಮಪಣಿಕ್ಕರನ ರಾಮಾಯಣ ಎಳುತ್ತಚ್ಛನ್ ರಾಮಾಯಣಕ್ಕೆ ಸರಿಸಾಟಿಯಾಗಿ ನಿಲ್ಲುವಂಥ ಕೃತಿಯಾಗುತ್ತಿತ್ತು. ಸಂಸ್ಕೃತ ರಾಮಾಯಣದ ಅನುವಾದವಾದರೂ ಕೆಲವು ಕಡೆ ಸಂಕ್ಷೇಪಗೊಳಿಸಿ ಇನ್ನು ಕೆಲವು ಕಡೆ ವಿಸ್ತರಿಸಿ ಭಾಷೆಯ ಜಾಯಮಾನಕ್ಕೆ ತಕ್ಕಂತೆ ಕೃತಿ ರಚಿಸಿದ್ದಾನೆ ಈ ಕವಿ. ಸೀತಾಸ್ವಯಂವರದ ಸಮಯದಲ್ಲಿ ರಾಮ ಬಿಲ್ಲು ಮುರಿದಾಗ ಪ್ರೇಕ್ಷಕರ ಪ್ರತಿಕ್ರಿಯೆಯನ್ನು ವಾಲ್ಮೀಕಿ ಎರಡು ಮೂರು ಶ್ಲೋಕಗಳಲ್ಲಿ ವಿವರಿಸಿದ್ದರೆ ಈತ ಕೇವಲ ನಾಲ್ಕೇ ಸಾಲಿನಲ್ಲಿ ಆಕರ್ಷಕವಾಗಿ ಹೇಳಿದ್ದಾನೆ.

ಸರ್ಪಗಳು ಗುಡುಗಿನ ಧ್ವನಿಗೆ  
ನಡುಗುವಂತೆ  
ಬಹುಮಂದಿರಾಜರು ಬಿಲ್ಲುಮುರಿದ  
ಶಬ್ದಕ್ಕೆ ನಡುಗಿ ಹೋದರು,  
ಗುಡುಗಿನ ಧ್ವನಿಗೆ ನವಿಲುಗಳು  
ನರ್ತಿಸುವಂತೆ  
ಬಿಲ್ಲು ಮುರಿದ ಧ್ವನಿ ಕೇಳಿ ಸೀತೆ  
ನಲಿದಾಡಿದಳು

ಅಶೋಕವನದಲ್ಲಿದ್ದ ಸೀತೆಯನ್ನು ಹನುಮಂತ ಕಂಡ ಬಗೆ:

"ಬಹಳಕಾಲದಿಂದ ಜಡೆಗಟ್ಟಿದ ಮುಡಿಯುಳ್ಳ ಸದಾ ದುಃಖಿತೆಯಾದ ಆಕೆಯು ನೆಲದಲ್ಲಿ ಮಲಗಿದ್ದಳು. ಎಡೆಬಿಡದೆ ಸುರಿಯುತ್ತಿರುವ ಅಶ್ರುಧಾರೆಯೊಂದಿಗೆ ಮಿಶ್ರಿತವಾದ ಧೂಳಿನಿಂದ ಮಲಿನವಾದ ಆಕೆಯ ವದನವನ್ನು ನೋಡಿದೆನು, ಆಕೆಯು ಹಬ್ಬನಿಯ ಪರದೆಯ ಮೂಲಕ ತೋರುತ್ತಿರುವ ಸೂರ್ಯನಂತೆಯೂ, ಅವಳ ಶೋಕ ಉರಿಯುವ ದೀಪದಿಂದ ಹೊರಹೊಮ್ಮುವ ಹೊಗೆಯಂತೆಯೂ ತೋರಿತು."

ಕವಿಯ ಚಿಂತನಾಶಕ್ತಿ, ಅನುಭವ ಸಾಮರ್ಥ್ಯ, ನಿರೂಪಣಾಶೈಲಿ ಸೊಗಸಾದುದು.

ಪೂನಂ ನಂಬೂದಿರಿಯ (ಕ್ರಿ. ಶ. ಸು. 1500) 'ಭಾಷಾ ರಾಮಾಯಣಚಂಪು' ಮಲಯಾಳದ ಇನ್ನೊಂದು ಮಹತ್ವಪೂರ್ಣ ಕೃತಿ. ಈತ ಕಲ್ಲಿಕೋಟೆಯ ಸಾಮೂದಿರಿ ಪಾಡನ ಹದಿನೆಂಟುವರೆ ಕವಿಗಳಲ್ಲಿ ಒಬ್ಬ. ಈತನಿಗೆ ಅರೆಕವಿ ಎಂದು ಹೆಸರು. ಏಕೆಂದರೆ ಈತನ ಬಗೆಗೆ ಇರುವ ಒಂದು ದಂತ

ಕಥೆಯ ಪ್ರಕಾರ 18 ಜನರೂ ಸಂಸ್ಕೃತ ಕವಿಗಳಾಗಿದ್ದು ಈತ ಮಾತ್ರ ಮಲಯಾಳ ಭಾಷೆಯ ಕವಿಯಾಗಿದ್ದುದೇ ಇದಕ್ಕೆ ಕಾರಣ ವಂತೆ! ಇಷ್ಟೊಂದು ಪ್ರತಿಭಾವಂತನಾದವ ನನ್ನು ಅರೆಕವಿ ಎನ್ನಲು ಇರುವ ಈ ಕಾರಣ ವಿಚಿತ್ರವೆನಿಸುತ್ತದೆ.

ಈತನ ಕೃತಿಗಳಲ್ಲೆಲ್ಲ 'ರಾಮಾಯಣ ಚಂಪು' ಪ್ರಮುಖವಾದುದು. ರಾವಣನ ಜನನದಿಂದ ರಾಮನ ಸ್ವರ್ಗಾರೋಹಣದ ವರೆಗಿನ ಸಂಪೂರ್ಣ ರಾಮಾಯಣವನ್ನು ಹೇಳುತ್ತಾನೆ ಈತ. ಮೂಲದ ಯಥಾವತ್ ಅನುವಾದವಲ್ಲ ಈ ಕೃತಿ. ಅಲ್ಲಲ್ಲಿ ಕೆಲವು ಬದಲಾವಣೆಗಳನ್ನೂ ಕಾಣಬಹುದು. ಇದ ರಲ್ಲಿ ಸಂಸ್ಕೃತ ಶಬ್ದಗಳು ಹೇರಳವಾ ಗಿದ್ದರೂ ಭಾಷೆ ಸರಳವಾಗಿರುತ್ತದೆ. ಕಥಾ ಸಂಯೋಜನೆ, ನಿರೂಪಣಾತಂತ್ರ, ಸೂಕ್ಷ್ಮವೂ ಸರಳವೂ ಆದ ಭಾವಾಭಿ ವ್ಯಕ್ತಿಗಳು ಜನಮನಕ್ಕೆ ಅರ್ಥವಾಗುವಂ ತಿವೆ. ಆದುದರಿಂದ ಈತ ಜನಪ್ರಿಯತೆ ಗಳಿಸಿದ್ದಾನೆ.

ಪೋರ್ಚುಗೀಸ್ ಮತ್ತಿತರ ಪಾಶ್ಚಾತ್ಯರ ವ್ಯಾಪಾರ ಸಂಬಂಧವಾದ ದಾಳಿಯಿಂದ ಹಾಗೂ ಸ್ಥಳೀಯ ರಾಜರ ಪರಸ್ಪರ ತಿಕ್ಕಾಟದಿಂದ ಹದಿನಾರನೆಯ ಶತಮಾನದಲ್ಲಿ ಕೇರಳದ ರಾಜಕೀಯ, ಸಾಮಾಜಿಕ, ಧಾರ್ಮಿಕ ಜೀವನ ಅಸ್ತವ್ಯಸ್ತಗೊಂಡಿತ್ತು. ಪಾಶ್ಚಾತ್ಯರ ಪ್ರಭಾವದಿಂದ ಸಾಕಷ್ಟು ಜನ ಮತಾಂತರ ಹೊಂದುತ್ತಿದ್ದರು. ಜಾತಿ ಪದ್ಧತಿಯನ್ನು ಬಿಟ್ಟು ಜನರೆಲ್ಲ ಒಂದುಗೂಡಿ ಏಕದೇವತಾರಾಧನೆ ಮಾಡಲು ಭಾರತದಲ್ಲಿ ಭಕ್ತಿಚಳುವಳಿ ನಡೆಸುತ್ತಿದ್ದ ಹಿಂದೂ ಧರ್ಮದ ಪುನರುಜ್ಜೀವನ ಕಾಲವದು.

ಇಂತಹ ಕಾಲದಲ್ಲಿ ಎಳುತ್ತಚ್ಚನ್ ಜೀವನದ ಅನಿಶ್ಚಿತತೆ, ಮೃತ್ಯುವಿನ ಅನಿವಾರ್ಯತೆ, ವೈದಿಕ ಸಂಸ್ಕೃತಿ ಹಾಗೂ ತಾತ್ತ್ವಿಕ ವಿಚಾರಗಳನ್ನು ಜನರಿಗೆ ತಿಳಿಯುವಂತೆ ತನ್ನ ಕೃತಿಗಳನ್ನು ರಚಿಸಿ, ಆ ಮೂಲಕ ಜನ ಜಾಗೃತಿಯುಂಟು ಮಾಡಿದ.

'ಅಧ್ಯಾತ್ಮ ರಾಮಾಯಣ ಕಿಳಿಪಾಟ್ಟು'- ಈತನ ಮೇರು ಕೃತಿ. ಎಲ್ಲರೂ ವಾಲ್ಮೀಕಿ ರಾಮಾಯಣದಿಂದ ಪ್ರೇರಿತರಾದರೆ ಈತ ಮಾತ್ರ ಅಧ್ಯಾತ್ಮರಾಮಾಯಣವನ್ನು ಅನುವಾದಿಸಿದ. ವಾಲ್ಮೀಕಿ ರಾಮನನ್ನು ಆದರ್ಶ ಮಾನವನಂತೆ ಚಿತ್ರಿಸಿದ್ದರೆ ಎಳುತ್ತಚ್ಚನ್ ರಾಮನನ್ನು ವಿಷ್ಣುವಿನ ಅವತಾರವೆಂದು ವರ್ಣಿಸಿ ದೈವತ್ವಕ್ಕೇರಿಸಿದ್ದಾನೆ. ಅಯೋಧ್ಯಾಕಾಂಡ, ಅರಣ್ಯಕಾಂಡ, ಕಿಷ್ಕಿಂಧಾ ಕಾಂಡ, ಸುಂದರಕಾಂಡ, ಯುದ್ಧಕಾಂಡ, ಉತ್ತರಕಾಂಡ ಎಂಬ ಆರು ಕಾಂಡಗಳಲ್ಲಿ ರಾಮಾಯಣ ರಚಿಸಿದ್ದಾನೆ.

ಎಳುತ್ತಚ್ಚನ್ ಭಕ್ತಕವಿಯಾದುದರಿಂದ ತನ್ನ ಕಾವ್ಯದಲ್ಲಿ ಎಲ್ಲೆಲ್ಲಿ ಸಾಧ್ಯವೋ ಅಲ್ಲೆಲ್ಲ ರಾಮನನ್ನು ಸ್ತುತಿಸಿದ್ದಾನೆ. ರಾಮನ ವರ್ಣನೆ:

ಸುಂದರಂ ರಾಮಚಂದಿರಂ
ಪರಮಾನಂದ
ಮಿಂದಿರಂ ಇಂದ್ರಾದಿ ವೃಂದಾರಕ
ವೃಂದ
ವಂದಿತಂ ಇಂದಿರಮಂದಿರೋರಸ್ಥಲಂ
ಇಂದ್ರವರಜಂ ಇಂದೀವರಲೋಚನಂ
(ಅಯೋಧ್ಯಾಕಾಂಡ)

ಎಳುತ್ತಚ್ಚನ್ ಬಳಸುವ ಅಲಂಕಾರದ ವರ್ಣನೆ ಆಕರ್ಷಕವಾಗಿರುತ್ತದೆ. "ರಾಮ ಬಿಲ್ಲು ಮುರಿದ ಸದ್ದು ಗುಡುಗಿನಂತೆ ಗುಡುಗಿ ಆ ಶಬ್ದಕ್ಕೆ ರಾಜರೆಲ್ಲರು ಸರ್ಪಗಳಂತೆ ನಡುಗಿದರು. ಆದರೆ ಮಿಥಿಲೆ ನವಿಲಿನಂತೆ ಸಂತೋಷದಿಂದಿತ್ತು. ಆಗ ಸೀತೆ ಹಾರ ಹಿಡಿದು ರಾಮನ ಬಳಿ ಬಂದಳು". ರಾಮನೊಡನೆ ಸೀತೆ ಕಾಡಿಗೆ ಹೋಗುವ ಸಂದರ್ಭ ದಲ್ಲಿಯ ಸೀತೆಯ ಮಾತು :

"ಕಲ್ಲುಮುಳ್ಳುಗಳ, ಹಳ್ಳಕೊಳ್ಳಗಳ ಹಾದಿಯಲ್ಲಿ ನನ್ನ ಸ್ವಾಮಿಯ ಜೊತೆ ಹೋಗುವಾಗ ಅವು ನನಗೆ ಹೂವುಗಳಂತೆ" (ಸುಂ.ಕಾಂ.)

ಎಳುತ್ತಚ್ಚನ್ ಚಿತ್ರಿಸುವ ಪಾತ್ರಗಳು ಈತನ ವ್ಯಕ್ತಿತ್ವವನ್ನು ಹಾಗೂ ಕೃತಿಯ ಮೌಲ್ಯವನ್ನು ತಿಳಿಸುತ್ತವೆ. ಕೇರಳದಲ್ಲಿ ಇಂದಿಗೂ ಮನೆಮನೆಗಳಲ್ಲಿ ಈ ಕೃತಿಯ ಪಾರಾಯಣವಾಗುವುದು.

17 ನೆಯ ಶತಮಾನದ ಕೇರಳವರ್ಮನ ರಾಮಾಯಣ, ಕಿಳಿಪಾಟ್ಟುವಿನಲ್ಲಿ ರಚಿತವಾದ ಇನ್ನೊಂದು ಕೃತಿ. ಕಾವ್ಯಗುಣದಲ್ಲಿ ಈ ಕೃತಿ ಎಳುತ್ತಚ್ಚನ್‌ನ ರಾಮಾಯಣಕ್ಕೆ ಹತ್ತಿರವಾಗಿ ನಿಲ್ಲುತ್ತದೆ. ಎಳುತ್ತಚ್ಚನ್ ಅಧ್ಯಾತ್ಮ ರಾಮಾಯಣವನ್ನು ಅನುಸರಿಸಿದರೆ ಈತ ಮತ್ತೆ ವಾಲ್ಮೀಕಿಯನ್ನೇ ಅನುಸರಿಸಿದ. ಆದರೆ ಎಳುತ್ತಚ್ಚನ್‌ನ ಕೃತಿಯಷ್ಟು ಇದು ಜನಪ್ರಿಯವಾಗಲಿಲ್ಲ.

ಇದೇ ಕಾಲದಲ್ಲಿ ರಾಮಾಶ್ವಮೇಧಂ ಎಂಬ ಕಿಳಿಪಾಟ್ಟು ಬಂತು. ಆದರೆ ಇದು ಅಷ್ಟೇನು ಮಹತ್ವದ ಕೃತಿಯಾಗಿಲ್ಲ.

ಕೇರಳದಲ್ಲಿ ಹಲವಾರು ರೀತಿಯ ರೂಪಕಗಳಿವೆ. ಇದಕ್ಕೆ ಸಂಬಂಧಿಸಿದ ಸಾಹಿತ್ಯ 16 ನೆಯ ಶತಮಾನದಿಂದ ವಿಕಾಸಗೊಳ್ಳತೊಡಗಿತು. ಅಟ್ಟಕಥ ಈ ಸಾಹಿತ್ಯದಲ್ಲಿ ಪ್ರಾಚೀನವಾದುದು. ಹದಿನಾರನೆಯ ಶತಮಾನದ ಉತ್ತರಾರ್ಧದಲ್ಲಿದ್ದ ಕೊಟ್ಟಾರಕ್ಕರ್ ತಂಬುರಾನನ 'ರಾಮನಾಟ್ಟಂ' ಮಲಯಾಳದ ಮೊದಲ ಅಟ್ಟಕಥ. 'ಕೃಷ್ಣನಾಟ್ಟಂ' ಎಂಬ ಇನ್ನೊಂದು ರೂಪಕದ ರೂಪಾಂತರ ಇದು. ಅಟ್ಟಕಥೆಯ ಪ್ರಮುಖ ಗುಣಗಳನ್ನು ಒಳಗೊಂಡ ಮೊದಲ ರಾಮಾಯಣ ನಾಟಕವಿದು. ರಾಮಾಯಣವನ್ನು 8 ಭಾಗಗಳಾಗಿ ವಿಂಗಡಿಸಿ ಇಡೀ ರಾತ್ರಿ ಕಥೆ ನಡೆಯುವಂತೆ ಇದನ್ನು ಸಂಯೋಜಿಸಲಾಗಿದೆ. ಈತ ವಾಲ್ಮೀಕಿ, ಕಂಬನ್, ಪೂನಂ- ರಿಂದ ಪ್ರಭಾವಿತನಾಗಿದ್ದಾನೆ. ಈತನ ಭಾಷಾಪ್ರೌಢಿಮೆ, ಸರಳನಿರೂಪಣೆ, ನಾಟಕೀಯ ಶೈಲಿಗೆ ಈ ಕೃತಿ ಪ್ರಸಿದ್ಧವಾಗಿದೆ. ಇಂದಿಗೂ ಇದನ್ನು ಅಭಿನಯಿಸುತ್ತಾರೆ.

ಕಿಲಿಮನೂರ್ ವಿದ್ವಾನ್ ಕೊಯಿ ತಂಬುರಾನನ (1825–75) 'ರಾವಣವಿಜಯಂ' ಪ್ರಸಿದ್ಧವಾದ ಅಟ್ಟಕಥೆ. ಇದು ಸಾಹಿತ್ಯಕ ಮೌಲ್ಯವುಳ್ಳದ್ದೂ ಪ್ರದರ್ಶನಯೋಗ್ಯವಾದುದೂ ಆದ ನಾಟಕ. ಈತ ಮಲಯಾಳಂ ಹಾಗೂ ಸಂಸ್ಕೃತದಲ್ಲಿ ಪ್ರಸಿದ್ಧ ವಿದ್ವಾಂಸ, ಈತ ರಾವಣನನ್ನು ಒಳ್ಳೆಯ ನಡತೆಯ ಉದಾತ್ತ ನಾಯಕನನ್ನಾಗಿ ಚಿತ್ರಿಸಿದ್ದಾನೆ.

(37ನೇ ಪುಟ ನೋಡಿ)



# ರಾಘವಾಂಕ ಚಿತ್ರಿಸಿದ ಚಂದ್ರಮತಿ

ಶ್ರೀಮತಿ ಎ. ಎಸ್. ಪಂಕಜ

'ಹರನೇ ಸತ್ಯ, ಸತ್ಯವೇ ಹರನು' ಎಂದು ಜಗತ್ತಿಗೆ ಸಾರಿದ ಕವಿಶರಭಭೇರುಂಡ ರಾಘವಾಂಕ ವಿರಚಿತ 'ಹರಿಚಂದ್ರ ಕಾವ್ಯ' ಒಂದು ಉತ್ತಮ ಕಲಾಕೃತಿ. ಇದು ಕಾವ್ಯವೂ ಹೌದು, ನಾಟಕವೂ ಹೌದು. ಇದರಲ್ಲಿ ಮೈವೆತ್ತಿರುವ ಪಾತ್ರಗಳು ಜೀವಂತವಾಗಿವೆ. ಪ್ರತ್ಯಕ್ಷವಾಗಿ ಕಣ್ಣ ಮುಂದೆ ನಿಂತಂತೆ ಕಾಣುತ್ತವೆ. ಆದರ್ಶಪ್ರಾಯವಾಗಿವೆ. ಆದ್ದರಿಂದಲೇ ಹರಿಶ್ಚಂದ್ರ, ವಿಶ್ವಾಮಿತ್ರ ವಶಿಷ್ಠ, ನಕ್ಷತ್ರಕ, ಚಂದ್ರಮತಿ–ಈ ಹೆಸರುಗಳು ಇಂದಿಗೂ ಕನ್ನಡದ ಮನೆಮಾತಿನಲ್ಲಿ ಬಳಕೆಯಲ್ಲಿವೆ.

ಚಂದ್ರಮತಿ ಭಾರತದ ಆದರ್ಶ ಸ್ತ್ರೀಯವಂತ ಪ್ರತೀಕದಂತಿದ್ದಾಳೆ. ಆಕೆ ಹರಿಶ್ಚಂದ್ರನ ನೆಚ್ಚಿನ ಮಡದಿ, ಪಟ್ಟಮಹಿಷಿ, ಆದರ್ಶಮಾತೆ, ಧರ್ಮಸ್ವರೂಪಿಣಿ ಸದಾ ಪತಿಹಿತ ಚಿಂತನೆಯಲ್ಲಿಯೇ ತೊಡಗಿ, ಆತನು ನಡೆದ ದಾರಿಯಲ್ಲಿಯೇ ನಡೆದು ಪತಿಭಕ್ತಿಯನ್ನೂ, ಪಾತಿವ್ರತ್ಯವನ್ನೂ ಜಗಕ್ಕೆ ಎತ್ತಿ ಸಾರಿದ್ದಾಳೆ.

"ಕೋಣನೆರಡುಂ ಹೋರೆ ಗಿಡುವಿಂಗೆ ಮಿತ್ತು" ಎಂಬ ಕ್ಷೋಣಿಯಾಡುವ ಗಾದೆಯಂತೆ, ದೇವೇಂದ್ರನ ಒಡ್ಡೋಲಗದಲ್ಲಿ ವಸಿಷ್ಠ ವಿಶ್ವಾಮಿತ್ರರ ಸಂವಾದ ಪ್ರತಿಜ್ಞೆಗಳಿಂದ ನಿರಪರಾಧಿ ಹರಿಶ್ಚಂದ್ರ ವಿಶ್ವಾಮಿತ್ರನ ಅನಿರೀಕ್ಷಿತ ಕೋಟಲೆ ಪರಂಪರೆಗಳಿಗೆ ಗುರಿಯಾಗಿ, ವಿಶ್ವಾಮಿತ್ರನಿಗೆ ಸಾಲಗಾರನಾಗಿ, ನಲವತ್ತೆಂಟು ದಿನಗಳ ಗಡುವನ್ನು ಕೇಳಿಕೊಂಡು, ವಿಶ್ವಾಮಿತ್ರನ ತೆರಕಾರನಾದ ನಕ್ಷತ್ರಕ ಕೊಡನೆ ವಾರಣಾಸಿಗೆ ಹೋಗುತ್ತಾನೆ. ಇಲ್ಲಿಂದ ಹರಿಶ್ಚಂದ್ರ ಹಿಂದಾಗಿ ಚಂದ್ರಮತಿ ಮುಂದಾಗುತ್ತಾಳೆ ಕಾವ್ಯದಲ್ಲಿ. ಗಡುವು ಸಮೀಪಿಸಲು ಗತ್ಯಂತರವಿಲ್ಲದೆ ಹೆಂಡತಿ, ಮಗನನ್ನು ಮಾರಿದ ರಾಜ ಕೊನೆಗೆ ತನ್ನನ್ನು ತಾನು ಚಂಡಾಲನಿಗೆ ಮಾರಿಕೊಂಡು ಅವಧಿಗೆ ಇನ್ನೆರಡು ಗಳಿಗೆ ಹೊತ್ತಿದ್ದಂತೆಯೇ ಹಣವನ್ನು ಕೊಟ್ಟು, ಋಣಮುಕ್ತನಾದನು.

ಚಂದ್ರಮತಿಯನ್ನು ಕೊಂಡುಕೊಂಡ ಒಡೆಯ ಬಹಳ ದುಷ್ಟ. ಆತನ ಮನೆಯಲ್ಲಿ ಆಕೆ ಪಡುವ ಕಷ್ಟ ವರ್ಣಿಸಲಸದಳ. ಈ ಮಧ್ಯೆ ಹಲುಹುಲ್ಲಿಗಾಗಿ ಅರಣ್ಯಕ್ಕೆ ಹೋದ ಲೋಹಿತಾಶ್ವ ಹಾವು ಕಚ್ಚಿ ಮಡಿಯುತ್ತಾನೆ. ಚಂದ್ರಮತಿಯು ಕಾಳೋರಗನಿಂದ ಮಡಿದ ಮಗನನ್ನು ಸುಡುಗಾಡಿಗೆ ಹೊತ್ತು ತಂದು ಯಾರಿಗೂ ಕಾಣದಂತೆ ಸುಡಬೇಕೆಂದು ಹವಣಿಸಲು, ಅದನ್ನು ತಿಳಿದ ಹರಿಶ್ಚಂದ್ರನು "ಸುಟ್ಟಿಯಾದೊಡೆ ವೀರಬಾಹುಕನಾಣೆ ಸುಂಕ ಕೊಟ್ಟಲ್ಲದೆ ಸುಡಬೇಡ" ಎಂದು ಮುಚ್ಚಿಗೆಯ ಮೇಲಿದ್ದ ಶವದ ಕಾಲನ್ನು ಹಿಡಿದು ಎಳೆದು ಬಿಸುಡುವನು. ಚಂದ್ರಮತಿ ದುಃಖದಿಂದ "ನಿನ್ನ ಶಿಶುವಿನೋಪಾದಿ ಸುಡಲನುಮತಿಯನ್ನಿತ್ತು ಕರುಣಿಸು ತಂದೆ" ಎಂದು ಬೇಡಿಕೊಳ್ಳುತ್ತಾಳೆ. ಅದನ್ನು ಕೇಳಿದ ಹರಿಶ್ಚಂದ್ರ 'ನಿನ್ನ ತಾಳಿಯ ಸ್ವಾಸರೂ ಅಡವಿರಿಸಿ ದಹನಕ್ರಿಯೆಯನ್ನು ನಡೆಸಿಕೊ, ಇಲ್ಲವೆ ಒಡೆಯನನ್ನಾದರೂ ಬೇಡಿ ತಾ' ಎಂದು ನಿರ್ದಾಕ್ಷಿಣ್ಯವಾಗಿ ಹೇಳುವನು.

ಚಂದ್ರಮತಿ ಒಡೆಯನ ಮನೆಗೆ ಹೋಗುತ್ತಿರುವಾಗ ಮಧ್ಯಮಾರ್ಗದಲ್ಲಿ ಕೌಶಿಕನ ಕೃತ್ರಿಮದಿಂದ ಕಾಶೀರಾಜ ಪುತ್ರನ ಕೊಲೆಯ ಅಪಾದನೆಯನ್ನು ಹೊತ್ತು ರಾಜನಿಂದ ಮರಣದಂಡನೆಗೆ ಗುರಿಯಾಗುತ್ತಾಳೆ. ಇವಳನ್ನು ವಧಿಸಲು ರಾಜನಿಂದ ಆಜ್ಞಪ್ತನಾದ ವೀರಬಾಹುಕ ತನ್ನ ಸೇವಕ ಚಂಡಾಲನಿಗೆ ಈ ಕೆಲಸವನ್ನು ವಹಿಸಿದನು. ಅವನು ಚಂದ್ರಮತಿಯನ್ನು ರುದ್ರಭೂಮಿಗೆ ಎಳೆತಂದು ಕುಳ್ಳಿರಿಸಿ, ಖಡ್ಗವನ್ನು ಸೆಳೆದು ಹೊಡೆಯಲನುವಾಗಿ "ನಿನ್ನ ಇಷ್ಟದೈವವ ನೆನೆದುಕೊ" ಎನ್ನುವನು. ಆಕೆಯು ಹಂಕೆಗಳನ್ನು ಕೇಳಿ ಬೆರಗಾಗಿ ತನ್ನ ಸತಿಯ ತಲೆಯನ್ನು ತನ್ನ ಕೈಯಾರ ಕೊಲಲನುವಾದನು. ಆಗ ಕಾಶೀನಾಥನೇ ಪ್ರತ್ಯಕ್ಷನಾದ. ದೇವಾದಿದೇವತೆಗಳೂ ವಸಿಷ್ಠ ವಿಶ್ವಾಮಿತ್ರರೂ ಅಲ್ಲಿ ನೆರೆದರು. ವಿಶ್ವಾಮಿತ್ರ ತನ್ನ ತಪಃ ಫಲದಲ್ಲಿ ಅರ್ಧವನ್ನು ಅವನಿಗೆ ಕೊಟ್ಟು,

ದುಃಸ್ವಪ್ನವನ್ನು ಕಂಡು ಅದರ ಅಂತಸ್ಥವೇನೆಂದು ಚಂದ್ರಮತಿಯನ್ನು ಕೇಳಿದಾಗ "ಬಗೆವಡೀ ಕನಸು ಗುರುವಾಜ್ಞೆಯಿಂ ಮೀರಿತಕ್ಕೊಗೆವ ಕೇಡಿಂಗೆ ಸೂಚನೆ. ಮುನಿಯಬೇಡ, ಮಂತ್ರಿಗೆ, ಮಗಂಗೆನಗೆ ರಾಜ್ಯಕ್ಕೆ ಚದುರಂಗ ಸೇನೆಗೆ, ಸಕಲ ಭಂಡಾರಕ್ಕೆ ನಗರಕ್ಕೆ ಸರ್ವ ಪರಿವಾರಕ್ಕೆ ತೇಜ ದೇಳ್ಗೆಗೆ ನಿನ್ನ ಹರಣಕ್ಕೆ ಕೇಡು ಬಂದಡೆ ಬರಲಿ ಮಿಗೆ ಸತ್ಯವಂ ಬಿಟ್ಟು ಕೆಡದಿರವನೀಶ" ಎಂದು ಕೈಮುಗಿದು ಬೇಡಿಕೊಳ್ಳುತ್ತಾಳೆ. ಹರಿಶ್ಚಂದ್ರನು "ಎನ್ನಯ ಮಕ್ಕಳಂ ಮದುವೆಯಾಗು" ಎಂದು ಅಡಿಗಡಿಗೆ ಕಟ್ಟು, ನುಡಿಯುತ್ತಿದ್ದ ವಿಶ್ವಾಮಿತ್ರನಿಗೆ ಸರ್ವಸಾಮ್ರಾಜ್ಯವನ್ನು ಧಾರೆಯೆರೆಯಲು ಹಿಂದುಮುಂದು ನೋಡುತ್ತಿದ್ದಾಗ, ಚಂದ್ರಮತಿ "ಹರನೇಕಭಾವವೆನಿಸುವ ಕೌಶಿಕಂ ಬೇಡುತಿರಲು ಮಂತ್ರವ ಮಾಳ್ಪರೆ? ಹರುಷದಿಂ ಸರ್ವರಾಜ್ಯವ ನೀವುದರಸ" ಎಂದು ಹೇಳುತ್ತಾಳೆ. ವಿಶ್ವಾಮಿತ್ರನ ಕೃತ್ರಿಮದಿಂದ ದಾರಿಯಲ್ಲಿ ದಾವಾಗ್ನಿ ಮುತ್ತಲು ಹೆಂಡತಿ ಮಗನನ್ನು ಉರಿಗೆ ಆಹುತಿ ಮಾಡಬೇಕಾಯಿತಲ್ಲ ಎಂದು ಹರಿಶ್ಚಂದ್ರ ಗಾಬರಿಯಿಂದ

ಅಯೋಧ್ಯಾಪುರಕ್ಕೆ ಕರೆದೊಯ್ದು ಪಟ್ಟಾಭಿಷೇಕ ಮಾಡಿದನು.

ರಾಘವಾಂಕ ರಚಿಸಿರುವ "ಹರಿಶ್ಚಂದ್ರ ಕಾವ್ಯ"ದ ನಾಯಕಿಯೇ ಚಂದ್ರಮತಿ. ಹರಿಶ್ಚಂದ್ರ

ದಿಕ್ಕು ತೋರದಂತಾಗುವನು. ಆಗ ಚಂದ್ರಮತಿ "ಮಳಿದು ಮೊಗೆದೆಲ್ಲರಂ ಕೊಲ್ಲದಿಂದೆನ್ನ ನೊಬ್ಬಳನೆ ಕೊಂದಪುದೆ ಭೂಭುಜ? ನಿಮ್ಮ ಕೂಡೆ ಸರಿಯೊಳು ಜೀವವಂ ಬಿಡುವುದುಚಿತ ವಲ್ಲಂ ಬಳಿಕ ಬಿಡುವುದತ್ಯಧಮತನವು; ಉಳಿಸಿ ಮೃತ್ಯುದೆ ತನದಲಿ ಮುಂದೆ ಹೋದಪೆಂ ಕಳುಹಿ ಕೊಡಬೇಕೆಂದು" ಬೇಡಿಕೊಳ್ಳುತ್ತಾಳೆ. ಅಷ್ಟೇ ಅಲ್ಲದೆ ಅವಳ ಪತಿವ್ರತಾಧರ್ಮ ಹಾಗೂ ಸದ್ಗುಣ ಗಳು ಒಂದು ಪಟ್ಟಿದಿಯಲ್ಲಿ ವ್ಯಕ್ತವಾಗುತ್ತವೆ.

ಚಂದ್ರಮತಿ ದಿಕ್ಕುಗಳಿಗೆ ನಮಿಸಿ, ದೈವಕ್ಕೆ ನಮಸ್ಕರಿಸಿ, ಸೂರ್ಯನಿಗೆ ವಂದಿಸಿ, ಕೋಟಿ ಕೋಟಿ ಜನ್ಮಗಳಲ್ಲಿಯೂ ಹರಿಶ್ಚಂದ್ರ ರಾಜನೇ ಪತಿಯಾಗಲಿ, ಲೋಹಿತಾಶ್ವನೇ ಮಗನಾಗಲಿ, ವಸುಸತ್ಯ ಕೀರ್ತಿಯೇ ಮಂತ್ರಿಯಾಗಲಿ, ಶಿವನೇ ದೈವವಾಗಲಿ, ನಮ್ಮ ರಾಜ್ಯವನ್ನು ಪಾಲಿಸುವ ವಿಶ್ವಾಮಿತ್ರ ಮಹರ್ಷಿ ನಿತ್ಯವಾಗಲಿ ಎಂದು ಪ್ರಾರ್ಥಿಸುತ್ತಾಳೆ. ಆ ಪತಿವ್ರತೆ ದಾವಾಗ್ನಿಯನ್ನು ಹೊಕ್ಕೊಡನೆಯೇ ಕೌಶಿಕನ ಕೃತಕಾಗ್ನಿ ಹರಿ ದೋಡಿ ಬಟ್ಟೆಗೊಟ್ಟಿತು. ಉತ್ತಮರ ಮುಂದೆ ಅವ ತಕ್ಕಿರ ಲಾವುದು? ಹರಿಶ್ಚಂದ್ರ ದಕ್ಷಿಣೆಯ ಧನವನ್ನು ಕೊಡಲು ಮಾರ್ಗವಿಲ್ಲದೆ ಸಾಲಿಗನ ಬಿರುನುಡಿಗಳಿಂದ ಧೃತಿಗೆಟ್ಟು, ಮರವಟ್ಟು ನಿಂತಿ ದ್ದಾಗ ಚಂದ್ರಮತಿ "ಎಗೆಯ್ವ ಚಿಂತಾಗ್ನಿಯು ರಿಯ ಹೊಯ್ಲಿಂ ಕರಗಿ ಹೋಗದಿರನೆಚ್ಚರಿಸ ಬೇಕೆಂದು ಸತಿಯುವಥಿನೋಗೆರಡು ಜಾವವಿದರೊ ಳಗೆ ತಿದ್ದುವ ಬುದ್ಧಿಯಂ ಕಾಣಬೇಕಲ್ಲದೆ ಮೂಗು ವಟ್ಟಿರ್ದಡೇನಹುದು? – ಸಾಲದಲ್ಲಿ ಪೋದನಿತು ಪೋಗಲೆಮ್ಮಿಬ್ಬರಂ ಮಾರಿ ಬಳಿಕಾದುದಂ ಕಾಣು ನಡೆ" ಎಂದು ಮಾರ್ಗವನ್ನು ತೋರಿಸುತ್ತಾಳೆ

ಹರಿಶ್ಚಂದ್ರನು ಇದಕ್ಕೆ ಸುಮ್ಮನೆ ಒಪ್ಪಿಯಾನೆ? ಆದರೆ ಚಂದ್ರಮತಿ ಬಿಡಲಿಲ್ಲ. "ಎಲೆ ಮರುಳೆ, ಸರ್ವಕ್ಕೆ ಮೊದಲು ಸತಿ ಸುತರು ತನ್ನ ಒಡಲು ಕಡೆ..." ಎಂದು ವಾದಿಸಿದಳು. ಹರಿಶ್ಚಂದ್ರನು ವಿಧಿಯಿಲ್ಲದೆ ಒಪ್ಪಿ ಹೆಂಡತಿ ಮಕ್ಕಳ ತಲೆಯ ಮೇಲೆ ಹುಲ್ಲುಕಡ್ಡಿಯನ್ನಿಟ್ಟು ಅವರನ್ನು ಮಾರು ತ್ತೇನೆಂದು ಸಾರುತ್ತಾ ಬಂದನು. ಇವರನ್ನು ಕೊಳ್ಳುವವರು ಯಾರು ಬರಬೇಕು? ಪೀಡೆಯನ್ನು ತಂದೊಡ್ಡಿದ ವಿಶ್ವಾಮಿತ್ರನೇ ಅದರ ನಿವಾರಣೆಗೂ ಬರಬೇಕಾಯಿತು. ಅವನ ಆಜ್ಞೆಯಿಂದ ಅಗ್ನಿಯು ವಿಪ್ರನಾಗಿ ಬಂದು ಕೊಂಡು ಕೊಂಡನು. ಹರಿ ಶ್ಚಂದ್ರನೆದುರಿಗೇ ಅವರನ್ನು "ಕೆಡೆಯೊದೆದು ನೂಕಿ ನಿಜಗೇಹಕ್ಕೆ ಜರೆವುತ್ತ ಕೊಂಡೊಯ್ದನು" ಒಡೆಯನ ಮನೆಯಲ್ಲಿ ಚಂದ್ರಮತಿ ಪಡುವ ಕಷ್ಟ ವರ್ಣಿಸಲಸದಳ. ಇವಳ ಗ್ರಹಚಾರವು ಕ್ರೂರ ವಾಯಿತು.

ಒಡೆಯನತಿ ಕೋಪಿ ಹೆಂಡತಿ ಮಹಾಮೂರ್ಖೆ
ಮಗ
ಕಡುಧೂರ್ತ ಸೊಸೆಯಾದಡಧಿಕನಿಷ್ಠುರೆ
ಮನೆಯ
ನಡೆವವರು ದುರ್ಜನರು ನೆರೆಮನೆಯವರು
ಮಿಥ್ಯಾವಾದಿಗಳು ಪಶುಗಳಗಡು।
ಅಡಿಗಡಿಗೆ ಕೋಪಿಸುವ ಸಾಯೆ ಸದೆಬಡಿವ ಕಾ
ಳ್ಗಡಿವ ಕಠಿಣ ನೆಣಸುವ ತಪ್ಪಸಾಧಿಸುವ
ಕೆಡೆಯೊದೆವ ಮಾರಿಗಾರದೆಸತ್ತು
ಹುಟ್ಟುತಿಹಂವನಿಪನ ಸತಿಪುತ್ರರು॥

ಆಕೆಯು ಇಂತವರ ಮಧ್ಯದಲ್ಲಿದ್ದು ಕೊಂಡು, ಭತ್ತ ಕುಟ್ಟಿ, ನೀರು ಹೊತ್ತು, ಹಾಕಿದ್ದನ್ನು ತಿಂದು ಕೊಂಡಿರಬೇಕಾಗಿತ್ತು. ಇಷ್ಟು ಸಾಲದೆಂದ ಒಂದು ದಿನ ಲೋಹಿತಾಶ್ವನು ಹುಲ್ಲು ಹುಳ್ಳಿಗ ಳನ್ನು ತರಲು ಕಾಡಿಗೆ ಹೋಗಿದ್ದಾಗ ಅಲ್ಲಿ ಒಂದು ಹುತ್ತದ ಮೇಲೆ ಹುಲುಸಾಗಿ ಬೆಳೆದಿದ್ದ ಹುಲ್ಲನ್ನು ನೋಡಿ "ಮನವುಬ್ಬಿ ನಾನಿದನೆಲ್ಲವಂ ಗಳ ಗಳನೆ ಕೊಯ್ದು ಕೊಂಡೊಯ್ದಿತ್ತಡೆ ಮೊಡೆಯ ಮುಳಿಯನೆಂಬಾಸೆಯಿಂ" – ಪಾಪ ಲೋಹಿತಾಶ್ವನಿಗೂ ಒಡೆಯನ ಕಾಟ! ಅವನ ಕೋಪದಿಂದ ಪಾರಾಗಬೇಕೆಂಬ ಪ್ರಯತ್ನ. ಅದ್ದ ರಿಂದ ಹುತ್ತದ ಮೇಲಿದ್ದ ಹುಲ್ಲನ್ನು ಕೊಯ್ದು ಹಾವು ಕಚ್ಚಿ ಸತ್ತು ಹೋದನು ಪತಿಯ ಸತ್ಯವೇ ಶಾಪಾಡುವುದೆಂದು ಇದ್ದ ಸತಿಗೆ ಪುತ್ರ ಶೋಕ ಬೇರೆ ಒದಗಿತು. ಅವಳ ರನ್ನ ಕನ್ನಡಿ ಸಿಡಿದು ಹೋಯಿತು. ಎಂದಿನಂತೆ ಬರುವ ಹೊತ್ತಿಗೆ ಲೋಹಿತಾಶ್ವ ಬರದೆ ಇರಲು ಗಾಬರಿ ಹಾಗೂ ಭಯದಿಂದ ಹೊರಗೆ ಒಳಗೆ ನೋಡುತ್ತಾ ಮನ ನೊಂದು ಮರಗುತ್ತಾ 'ಬಂದರಂ ಲೋಹಿತಾಶ್ವ ಎಂದು, ಬಟ್ಟೆಯೊಳು ನಿಂದರಂ ಲೋಹಿತಾಶ್ವಾ ಎಂದು, ಗಾಳಿ ಗಿರಿಕೆಂದಡಂ ಲೋಹಿತಾಶ್ವಾ ಎಂದು ಕರೆಕರೆದು ಬಿಡೆ ಬೀದಿಗರುವಿನಂತೆ' ಮಂದಮತಿಯಾಗಿರ್ದ ಚಂದ್ರಮತಿಗೊಬ್ಬನು ಬಂದು ಲೋಹಿತಾಶ್ವ ಹಾವು ಕಚ್ಚಿ ಸತ್ತ ವರ್ತಮಾನವನ್ನು ತಿಳಿಸಿದನು. ಆಗ ಅರ್ಧ ರಾತ್ರಿಯ ಸಮಯ ನೀನೇ ಎನ್ನುವರಿಲ್ಲ, ಆಗ ಅವಳು ಯಜಮಾನನ ಕಾಲಮೇಲೆ ಬಿದ್ದು ತನ್ನ ಮಗ ಹಾವು ಕಚ್ಚಿ ಸತ್ತನೆಂದು ಹೇಳಲು ಅವನು "ಲೇಸಾಯ್ತು; ಮಡಿದರೆ ಮಡಿದಂ" ಎಂದು ಬಿಟ್ಟ.

ಚಂದ್ರಮತಿ : ಬಂಟರನು ಕೊಟ್ಟರಸಿಸೈ ತಂದೆ

ಯಜಮಾನ : ನಡುವಿರುಳು ಬಂಟರುಂಟೇ? ನಿದ್ದೆಗೈಯ ಬೇಕೇಳು ಕಾಡದಿರು?

ಚಂದ್ರಮತಿ : ನಂಗಳಿಳೆಯುದ ಮುನ್ನ ದಹಿಸ ಬೇಡವೆ ತಂದೆ? ಕರುಣಿಸು.

ಯಜಮಾನ : ದುರ್ಮರಣವಟ್ಟ ಶೂದ್ರನಂ ಸಂಸ್ಕರಿಸುವವರಾವಲ್ಲ.

ಚಂದ್ರಮತಿ : ಅನಾದಡಂ ಹೋಗಿ ಕಂಡು ಮಗನ ಉಂಗಿತ್ತು ಬಪ್ಪೆನೇ?

ಯಜಮಾನ : ಕೆಲಸವಂ ಬಿಟ್ಟು, ಹರಿಯದಿ ರ್ದದನೈದೆ ಗೆಯ್ದು ಹೋಗು

ಚಕ್ರವರ್ತಿನಿಯಾಗಿದ್ದವಳಿಗೆ ಎಂಥಗತಿ! ಇಷ್ಟು ಮಾತು ಆಡಿಯೇ ಅಭ್ಯಾಸವಿಲ್ಲ ಅವಳಿಗೆ ಅವಳ ಅಪೇಕ್ಷೆ ಅಂದು ತೋರಿಸದೆಯೇ ಪೂರ್ತಿಯಾ ಗುವಂತಹುದು. ಇಂತಲ್ಲಿ ಆಕೆ ಮಗನ ಶವವನ್ನು ಒಪ್ಪ ಮಾಡುವುದಕ್ಕೂ ಬೇಡುತ್ತಿದ್ದಾಳೆ. ತನ್ನ

ಕಷ್ಟ ಕಾಲದಲ್ಲಿ ಏಕಾವಲಂಬನವಾಗಿದ್ದ ಪ್ರಿಯ ಪುತ್ರನನ್ನು ಕಳೆದುಕೊಂಡು ಇರುವುದು ಹೇಗೆ? ಆಗಲೂ ತನ್ನ ಚಿಂತೆಗಿಂತ ಹೆಚ್ಚಾಗಿ ಹರಿಶ್ಚಂದ್ರನ ಚಿಂತೆ.

ಅತಿಲಜ್ಜೆ ಗೆಟ್ಟನ್ಯರಾಳಾಗಿ ದುಡಿದು ಧಾ
ವತಿಗೊಂಡು ಧನವನಾರ್ಜಿಸಿ ಹರಿಶ್ಚಂದ್ರ ಭೂ
ಪತಿ ನಮ್ಮ ಬಿಡಿಸುವಾರ್ತಡ ಮೋಹದಿಂ
ಹಸಿವು ನಿದ್ದೆಯುಂ ತೊರೆದು ಬಂದು
ಸುತನ ಕರೆಯೆಂದೆಡೇನೆಂಬೆನಾವುದು ತೋರಿ
ಪತಿಯ ಮರುಕವನು ಮರೆಯಿಸುವೆನು
ಗ್ರಾಹಿಗಾ
ಹುತಿಯಾದನೆಂದು ಪೇಳ್ವೆನೆ ಎನ್ನ ಕಂದ
ಎಂದಿಂದುಮುಖಿ ಬಾಯಿಟ್ಟಳು

ಕೊನೆಗೆ ಮನೆಗೆಲಸವನ್ನೆಲ್ಲ ಮಾಡಿ ದಟ್ಟೈಸಿ ಮಡಲಿರಿದ ತಾಣದೊಳು ನಡುವಿರುಳು ಒಬ್ಬಳೇ ಹೋಗಿ ಮಗನನ್ನು ನೋಡಿ ಅವನ ಮೇಲೆ ಧೊಪ್ಪನೆ ಕೆಡೆಯುತ್ತಾಳೆ. ಆಕೆಯ ಶೋಕದ ಪ್ರಸಂಗ ಒಂದು ಭಾವಗೀತೆಯಂತಿದೆ.

ಚತುರ ಕವಿರಾಯ ಹಂಪೆಯ ಹರೀಶ್ವರನ ವರಸುತ ರಾಘವಾಂಕ ಕವಿಯು ಚಂದ್ರಮತಿಯ ವಿಲಾಪವನ್ನು ವಾರ್ಧಕ ಷಟ್ಪದಿಯನ್ನು ಬಿಟ್ಟು ಮಂದಾನಿಲ ರಗಳೆಯ ಚಂಚಲ ಚಲನವನ್ನು ಉಪಯೋಗಿಸಿದ್ದಾನೆ. ರಾಘವಾಂಕನ ಅನನುಕರಣೀಯ ಶೈಲಿಯನ್ನು ಮುಟ್ಟಿದರೆ ಹಸುರೆಲೆಯ ಮೇಲಿರುವ ಶಿಶಿರಬಿಂದುವನ್ನು ಮುಟ್ಟಿದಂತಾಗುತ್ತದೆ. ಕಲ್ಲೆದೆಯು ಕರಗಿ ನೀರಾಗುತ್ತದೆ. ಹಾವು ಕಚ್ಚಿ ಮಡಿದು ಬಿದ್ದಿರುವ ಲೋಹಿತಾಶ್ವನನ್ನು ನೋಡಿ ಹಲುಬಿ ವಿಲಾಪ ಮಾಡುವ ಚಂದ್ರಮತಿಯ ಶೋಕ ಅಪರಿಮಿತವಾದುದು.

ಏನೇನೇನೆಲೆ ಮಗನೇ ಮಗನೇ
ಸಾವೇ ಕಾಯಿತ್ತಲೆ ಚೆನ್ನಿಗನೇ
ಇಂದಿದೆಯೆಲಾ ಎನ್ನನು ಸುಕುಮಾರಾ
ಕೊರೆದೆಯೆಲಾ ಕೊರಳನು ಜಿತಮಾರಾ
ಎತ್ತಣ ಬರಸಿಡಿಲೆರಗಿತೋ ನಿನ್ನ
ಹುತ್ತಿನ ಹತ್ತಿರ ಒರಗಿದೆ ಚೆನ್ನ
ಹಾವು ಹಿಡಿಯೆ ಹಾ ಎಂದೊರಲಿದೆಯೊ
ಸಾವಾಗವ್ವಾ ಎಂದಳಲಿದೆಯಾ

"ರನ್ನದ ಕನ್ನಡಿ ಸಿಡಿದುದು ದೇವಾ, ಹೊನ್ನ ಕಳಶ ಕೆಡೆದುದು, ಹೊನ್ನ ಪ್ರತಿಮೆ ಹಾರಿ ಹೋಯಿತು, ಸೂರ್ಯವಂಶ ಲತೆ ಕುಡಿ ಮುರುಟಿ ಹೋಯಿತು. ರಾಜ ಹರಿಶ್ಚಂದ್ರ ಇಟ್ಟ ಕಲ್ಪವೃಕ್ಷ ಮುರಿಯಿತು. ಎಲೈ, ಕಾಲನೇ! ಕರುಣೆ ಇಲ್ಲದೆ ಎನ್ನ ಬಾಲನನ್ನು ನನ್ನಿಂದ ಅಗಲಿಸಿ ಕೊರಳ ಕೊಯ್ದೆ. ನಾನು ಹಿಂದೆ ಯಾರ ಸಿರಿಯನ್ನು ಎಳೆತಂದನೋ, ಯಾರಿಗೆ ಏನು ಕಷ್ಟ ಕೊಟ್ಟೆನೋ ನನಗೆ ಈ ಸ್ಥಿತಿ ಒದಗಿತು. ಹೆತ್ತ ಹೊಟ್ಟೆ ಉರಿಯುತ್ತಿದೆ ಮಗನೆ, ಹಾಡುವ ಬಾಯಲ್ಲಿ ಮಣ್ಣನ್ನು ಹೊಯ್ದೆ, ನೋಡುವ ಕಣ್ಣಲಿ ಸುಣ್ಣವ ಹೊಯ್ದೆ, ಪಾಪಿಯಾದ ನನ್ನನ್ನೊಮ್ಮೆ ನೋಡು. ಕೋಪವನ್ನು ಬಿಟ್ಟು ಮಾತಾಡು. ಹೆತ್ತವರೊಡನೆ ಮಾತನಾಡಿದರೆ ಪಾಪವೇ ಮಗನೆ? ನನ್ನೊಡನೆ ನಿನಗೆ ಕಡು ಮುಳಿಸೆ".

ಇಲ್ಲಿ ಮಗನ ಸಾವಿನಿಂದ ಶೋಕಾಕುಲೆಯಾದ ಚಂದ್ರಮತಿ ತನ್ನ ಮಗ ಸತ್ತಿರುವನೆಂಬುದೇ ಮರೆತಂತಿದೆ. ಅಂದರೆ ಅವಳಿಗೆ ಪುತ್ರನ ಸಾವು ಅಂತಹ ಹೃದಯ ಘಾತವನ್ನುಂಟು ಮಾಡಿರುವುದರಿಂದ ಮಾತಾಡು ಎಂದು ಕೇಳಿಕೊಳ್ಳುತ್ತಿದ್ದಾಳೆ.

ಕೊನೆಗೆ ತಾನು ಎತ್ತಿ ಆಡಿಸಿದ ಭುಜದ ಮೇಲೆ ಹೆಣವನ್ನು ಹಾಕಿಕೊಂಡು ಪುತ್ರಶೋಕಾಗ್ರಹಾವಿಷ್ಟಳಾಗಿ ದಾರಿಯ ಕಲ್ಲುಮುಳ್ಳುಗಳ ಮೇಲೂ ಜ್ಞಾನವಿಲ್ಲದೆ ಸ್ಮಶಾನಕ್ಕೆ ಬಂದಳು. ಮೃತಪಟ್ಟ ಮಗನನ್ನು ತಂದು ಯಾರಿಗೂ ಕಾಣದಂತೆ ಸುಡಬೇಕೆಂದು ಹವಣಿಸುತ್ತಾಳೆ. ಗಳಗಳನೆ ಮುನ್ನ ಬೆಂದು ಉಳಿದಿದ್ದ ಕರಿಗೊಳ್ಳಿಗಳನ್ನೆಲ್ಲವನ್ನು ತಂದು ಜೋಡಿಸಿ ಅದರ ಮೇಲೆ ಮಂಗಳಮಯ ಕುಮಾರನನ್ನು ಮಲಗಿಸಿ ಬೇರೆ ಹೆಣವನ್ನು ಉರಿಸುತ್ತಿರುವ ಕೊಳ್ಳಿಯನ್ನು ತಂದು 'ನಿಂದು ಬೆಳೆದಲ್ಲಿ ಬೆಳೆ, ಹುಟ್ಟಿದಲ್ಲಿ ಹುಟ್ಟೆಂದು' ಬಾಯಳಿದು ಮೊರೆಯಿಟ್ಟಳು ಚಂದ್ರಮತಿ. ಆ ದನಿ ಕೇಳಿ ನಿದ್ದೆ ತಿಳಿದೆದ್ದು ಬಂದ ಹರಿಶ್ಚಂದ್ರ. ಈ ಮಧ್ಯರಾತ್ರಿಯಲಿ ಸುಡುಗಾಡಿನಲ್ಲಿ ಒಬ್ಬಳೇ ಬಂದು ಹಲುಬುವ ವೀರನಾರಿ ಯಾರೊ 'ಮೀರಿ ಸುಟ್ಟೆಯಾದೊಡೆ. ನಿನಗೆ ವೀರಬಾಹುಕನಾಣೆ, ಕದ್ದು ಸುಡಬಂದ ನಿನ್ನ ನಿಟ್ಟೆಲುವ ಮುರಿವೆನು' ಎಂದು ಜರಿಯುತ್ತಾ ಹಿಡಿದಿದ್ದ ಕೆಚ್ಚನ್ನು ಕೆದರಿ ಮುಟ್ಟಿಗೆಯ ಮೇಲಿದ್ದ ಸುತನ ಹಿಂಗಾಲಿಡಿದು ಸೆಳೆದು ಬಿಸುಟನು. ಆಗ ಚಂದ್ರಮತಿ,–



ಬಿಸುಡದಿರು ಬಿಸುಡದಿರು ಬೇಡ
ಬೇಡಕಟಕಟ
ಹಸುಳೆ ನೊಂದಹನೆಂದು ಬೀಳ್ವವನನೆತ್ತಿ ತ
ಕ್ಕೈಸಿ ಕೊಂಡು ಕುಲವ ನೋಡದೆ ಬೇಡಿಕೊಂಬೆ
ನಿವನೆನ್ನ ಮಗನಲ್ಲ ನಿನ್ನ
ಸಿಸುವಿನೋಪಾದಿ ಸುಡಲನುಮತವನಿತ್ತು
ರಕ್ಷಿಸು ಕರುಣಿ

ಎಂದು ಬೇಡಿಕೊಳ್ಳುವಳು. ಸತ್ತ ಪುತ್ರನ ಶೋಕದ ವ್ಯಾಕುಲ ಎಷ್ಟಾಗಿದೆ ಎಂದರೆ ಹಸುಳೆ ಸತ್ತಿಲ್ಲ ಪ್ರಾಣವಿದೆ, ಕಾಲು ಹಿಡಿದು ಎಳೆದು ಹಾಕಿದರೆ ಅವನಿಗೆ ನೋವಾಗುತ್ತದೆ; ಎಂಬ ಅಭಿಪ್ರಾಯ ಅವಳದು. ಎಂತಹ ವಿಪರ್ಯಾಸ. ಇಲ್ಲಿ ಅವಳಿಗೆ ತಿಳಿಯದು ನಿಂತಿರುವವ ಹರಿಶ್ಚಂದ್ರ ತನ್ನ ಪತಿ ಯೆಂದು. ಬೇಡುತ್ತಿದ್ದಾಳೆ 'ಇವನೆನ್ನ ಮಗನಲ್ಲ ನಿನ್ನ ಸಿಸುವಿನೋಪಾದಿ' ಎಂದು. "ಶಿರೆಯನಿಕ್ಕದೆ ಸುಡಲಾರದು ; ಉಳ್ಳೊಡೆ ಸುಡಲ್ಬಹುದು" ಎಂದ ಅವ. ಚಂದ್ರಮತಿ ಮಸಾಣದ ಸುಂಕ ಕೊಡಲು ತನ್ನ ಬಳಿ ಏನೂ ಇಲ್ಲ. ತಾನು ಬೇರೊಬ್ಬರ ಮನೆಯಲ್ಲಿ ಕೆಲಸ ಮಾಡುವ ಬಡದಾಸಿ ಎಂದು ಹೇಳಲು, ಹರಿಶ್ಚಂದ್ರನು ನಿನ್ನ ಮಾಂಗಲ್ಯ ವನ್ನಾದರೂ ಅಡವಿರಿಸಿ ದಹನಕ್ರಿಯೆಯನ್ನು ನಡೆಸಿಕೊ, ಇಲ್ಲವೆ ಒಡೆಯನನ್ನಾದರೂ ಬೇಡಿತಾ ಎಂದು ನಿರ್ದಾಕ್ಷಿಣ್ಯವಾಗಿ ಹೇಳುವನು. ನಂತರ ಚಂದ್ರಮತಿಯ ಮಾತುಗಳಿಂದ ಹರಿಶ್ಚಂದ್ರನಿಗೆ ಸತ್ತಿರುವವನು ತನ್ನ ಮಗನೆಂದು ತಿಳಿದು ಬಹುವಾಗಿ ಶೋಕಿಸಿದನು. ಮಗ ಸತ್ತನೆಂದು ದುಃಖವಲ್ಲ, "ಅರಿರಾಯರೊಳು ಕಾದಿ ಮಡಿದಾತನಲ್ಲ. ಬಡ ಹಾವುಕಚ್ಚಿ ಮುನಿವಂಗೆ ನಗೆಗೆಡೆಯಾಗಿ ನಿಷ್ಕಾರಣಂ ಮಡಿವರೇ ...... ಎಂದು. ಸುಡುಗಾಡನ್ನು ಕಾಯುತ್ತಿರುವವನು ತನ್ನ ಪತಿಯೆಂದು ತಿಳಿದ ಮೇಲಂತೂ ಗಾಯದ ಮೇಲೆ ಬರೆ ಎಳೆದಂತೆ ಚಂದ್ರಮತಿ ತೂಕದ ಕೋಲ ತೊಲೆಯಾಗುತ್ತಾಳೆ. ತೆರವನ್ನು ತರಲು ಒಡೆಯನಲ್ಲಿಗೆ ಹಿಂತಿರುಗುತ್ತಿದ್ದಾಗ, ಕೌಶಿಕನ ಕೃತ್ರಿಮದಿಂದ ಕಾಶೀರಾಜ ಪುತ್ರನ ಮರಣದ ಅಪಾದನೆಯನ್ನು ಹೊತ್ತು ರಾಜನಿಂದ ಮರಣದಂಡನೆಗೆ ಗುರಿಯಾಗುತ್ತಾಳೆ. ಇವಳನ್ನು ವಧಿಸಲು ರಾಜನಿಂದ ಆಜ್ಞಪ್ತನಾದ ವೀರಬಾಹುಕ, ತನ್ನ ಸೇವಕನಿಗೆ ಈ ಕೆಲಸವನ್ನು ವಹಿಸಿದನು. ಅವನು ಚಂದ್ರಮತಿಯನ್ನು ರುದ್ರಭೂಮಿಗೆ ಎಳೆತಂದು ರುಂಡ ಮುಂತಾಗಿ ಕುಳ್ಳಿರಿಸಿ, ಖಡ್ಗವನ್ನು ಸೆಳೆದು ಹೊಡೆಯಲನುವಾಗಿ "ನಿನ್ನ ಇಷ್ಟದೈವವ ನೆನೆದುಕೊ" ಎನ್ನುವನು. ಆಕೆಯ ಹರಕೆಗಳಾದರೋ ಎಂತಹವು.

ಬಲಿದ ಪದ್ಮಾಸನಂ ಮುಗಿದಕ್ಷಿ ಮುಚ್ಚಿದಂ
ಜಲಿವೆರಸಿ ಗುರು ವಸಿಷ್ಠಂಗೆರಗಿ ಶಿವನ ನಿ
ರ್ಮಲ ರೂಪ ನೆನೆದು ಮೇಲಂ ತಿರುಗಿ
ನೋಡಿ ಭೂ ಚಂದ್ರಾರ್ಕತಾರಂಬರಂ।
ಕಲಿಹರಿಶ್ಚಂದ್ರರಾಯಂ ಸತ್ಯವೆರಸಿ ಬಾ
ಳಲಿ ಮಗಂ ಮುಕ್ತನಾಗಲಿ ಮಂತ್ರಿ
ನೆನೆದುದಾ
ಗಲಿ ರಾಜ್ಯದೊಡೆಯ ವಿಶ್ವಾಮಿತ್ರ
ನಿತ್ಯನಾಗಲಿ ಹರಕೆ ಹೊಡೆ

ಎನ್ನುತ್ತಾಳೆ. ಸಾಹಿತ್ಯ ಪ್ರಪಂಚದಲ್ಲಿ ಇಂತಹ ಆದರ್ಶ ವ್ಯಕ್ತಿಗಳನ್ನು ಸಂದರ್ಶಿಸುವುದು ತೀರ ಅಪರೂಪ. ಹರಿಶ್ಚಂದ್ರನು "ಹರಕೆಯಂ ಕೇಳ ದಪ್ಪನೆ ಹಾರಿ...... ಪತಿಯಾಜ್ಞೆಯುಳಿದಡೆ ಸಾಕೆನುತ" ಸತಿಯ ತಲೆಯ ಮೇಲೆ ಪರಶುವನ್ನು ಇಳಿಸಿದನು. ಆದರೆ ಆಕೆಯ ಕೊರಳ ಪ್ರದೇಶ ದಿಂದ ವಿಶ್ವನಾಥನು ವೈದೋರಿ ಹರಿಶ್ಚಂದ್ರನನ್ನು ಅಪ್ಪಿಕೊಂಡು ಸಂತೈಸಿದನು.

ಒಟ್ಟಿನಲ್ಲಿ ಉಭಯಕವಿ ಕಮಲರವಿ ರಾಘವಾಂಕನ ಚಂದ್ರಮತಿ ಸಾಧ್ವಿ, ಪತಿವ್ರತೆ, ಧೈರ್ಯವಂತೆ, ಶಾಶ್ವತವಾಗಿ ರಾರಾಜಿಸುತ್ತಿರುವ ಧ್ರುವತಾರೆ

★

(8ನೇ ಪುಟದಿಂದ)

ಮೂಢಗ್ರಾಹೇಣಾತ್ಮನೋ ಯತ್
ಪೀಡಯಾ ಕ್ರಿಯತೇ ತಪಃ।
ಪರಸ್ಯೋತ್ಸಾದನಾರ್ಥಂ ವಾ
ತತ್ತಾಮಸ ಮುದಾಹೃತಮ್ ॥ 19

ಅವಿವೇಕದ ನಿಶ್ಚಯದಿಂದ ತನ್ನ ಶರೀರವನ್ನು ಗಾಸಿಗೊಳಿಸಿಯೋ ಅಥವಾ ಮತ್ತೊಬ್ಬರಿಗೆ ಕೇಡನ್ನುಂಟುಮಾಡಬೇಕೆಂದೋ ಮಾಡುವ ತಪಸ್ಸು ತಾಮಸವೆನಿಸುವುದು.

ದಾತವ್ಯಮಿತಿ ಯದ್ದಾನಂ
ದೀಯತೇಽನುಪಕಾರಿಣೇ।
ದೇಶೇ ಕಾಲೇ ಚ ಪಾತ್ರೇ ಚ
ತದ್ದಾನಂ ಸಾತ್ತ್ವಿಕಂ ಸ್ಮೃತಮ್ ॥ 20

ಪ್ರತ್ಯುಪಕಾರ ದೃಷ್ಟಿ ಅಥವಾ ಪ್ರತ್ಯುಪಕಾರದ ನಿರೀಕ್ಷೆಯೂ ಇಲ್ಲದೆ ಕೇವಲ ಕರ್ತವ್ಯ ದೃಷ್ಟಿಯಿಂದ ಪುಣ್ಯಸ್ಥಲದಲ್ಲಿ ಪುಣ್ಯಕಾಲದಲ್ಲಿ ಯೋಗ್ಯತೆಯನ್ನು ನೋಡಿ ಕೊಡುವ ದಾನವು ಸಾತ್ತ್ವಿಕವೆನಿಸುವುದು.

ಯತ್ತು ಪ್ರತ್ಯುಪಕಾರಾರ್ಥಂ
ಫಲಮುದ್ದಿಶ್ಯ ವಾ ಪುನಃ।
ದೀಯತೇ ಚ ಪರಿಕ್ಲಿಷ್ಟಂ
ತದ್ದಾನಂ ರಾಜಸಂ ಸ್ಮೃತಮ್ ॥ 21

ಮುಂದೆ ಉಪಕಾರವಾಗಬೇಕೆಂಬ ನಿರೀಕ್ಷೆಯಿಂದಲೋ, ಅಥವಾ ಫಲವನ್ನು ನಿರೀಕ್ಷಿಸಿ ಕೊಂಡೋ, ಕೊಡಬೇಕಾಗಿರುವುದೆಂಬ ವ್ಯಥೆಯಿಂದಲೋ ಕೊಡುವಂಥ ದಾನವು ರಾಜಸವೆನಿಸುವುದು:

ಅದೇಶಕಾಲೇ ಯದ್ದಾನಂ
ಅಪಾತ್ರೇಭ್ಯಶ್ಚ ದೀಯತೇ।
ಅಸತ್ಕೃತಮವಜ್ಞಾತಂ
ತತ್ತಾಮಸ ಮುದಾಹೃತಮ್ ॥ 22

ಪುಣ್ಯಸ್ಥಳವಲ್ಲದ ಕಡೆ ಪುಣ್ಯಕಾಲವಲ್ಲದಾಗ ಅಯೋಗ್ಯರಿಗೆ ಅನಾದರದಿಂದ ಅಪಮಾನ ಪೂರ್ವಕವಾಗಿ ಕೊಟ್ಟ ದಾನವು ತಾಮಸವೆನಿಸುವುದು.

ಓಂ ತತ್ಸದಿತಿ ನಿರ್ದೇಶೋ
ಬ್ರಹ್ಮಣ ಸ್ತ್ರಿವಿಧಃ ಸ್ಮೃತಃ।
ಬ್ರಾಹ್ಮಣಾ ಸ್ತೇನ ವೇದಾಶ್ಚ
ಯಜ್ಞಾಶ್ಚ ವಿಹಿತಾಃ ಪುರಾ ॥ 23

ಪರಬ್ರಹ್ಮನು ಗುರುತಿಸುವ ಹೆಸರುಗಳು ಓಂ, ತತ್, ಸತ್ ಎಂದು ಮೂರು ಬಗೆಯಾಗಿ ಜ್ಞಾನಿಗಳು ಹೇಳಿರುವರು. ಈ ಬ್ರಹ್ಮನಿಂದ ಸೃಷ್ಟಿಕಾಲದಲ್ಲಿ ಜ್ಞಾನಿಗಳೂ ವೇದಗಳೂ ಯಜ್ಞಗಳೂ ಸೃಷ್ಟಿಯಾದವು.

ತಸ್ಮಾದೋಮಿತ್ಯುದಾಹೃತ್ಯ
ಯಜ್ಞ ದಾನತಪಃಕ್ರಿಯಾಃ।
ಪ್ರವರ್ತಂತೇ ವಿಧಾನೋಕ್ತಾಃ
ಸತತಂ ಬ್ರಹ್ಮವಾದಿನಾಮ್ ॥ 24

ಆದ್ದರಿಂದ ಶಾಸ್ತ್ರದಲ್ಲಿ ಹೇಳಿರುವಂತೆ ವೇದಾಧ್ಯಯನ, ಸಂವತ್ಸರ ಯಜ್ಞ, ದಾನ, ತಪಸ್ಸು ಮೊದಲಾದವುಗಳೆಲ್ಲ ಯಾವಾಗಲೂ 'ಓಂ' ಎಂದ ಮೇಲೆಯೇ ಸಾಗುವುವು.

ತದಿತ್ಯನಭಿಸಂಧಾಯ ಫಲಂ
ಯಜ್ಞ ದಾನ ತಪಃಕ್ರಿಯಾಃ।
ದಾನಕ್ರಿಯಾಶ್ಚ ವಿವಿಧಾಃ
ಕ್ರಿಯಂತೇ ಮೋಕ್ಷಕಾಂಕ್ಷಿಭಿಃ ॥ 25

ಮೋಕ್ಷವನ್ನು ಬಯಸುವವರು ತತ್ ಎಂಬ ಶಬ್ದವನ್ನು ಹೇಳಿದ ಮೇಲೆಯೇ ಫಲವನ್ನುದ್ದೇಶಿಸದೆ ಯಜ್ಞ, ತಪಸ್ಸು ಮೊದಲಾದವುಗಳನ್ನೂ ಬಗೆಬಗೆಯ ದಾನಗಳನ್ನೂ ಮಾಡುವರು.

ಸದ್ಭಾವೇ ಸಾಧುಭಾವೇ ಚ
ಸದಿತ್ಯೇತತ್ ಪ್ರಯುಜ್ಯತೇ।
ಪ್ರಶಸ್ತೇ ಕರ್ಮಣಿ ತಥಾ
ಸಚ್ಛಬ್ದಃ ಪಾರ್ಥ ಯುಜ್ಯತೇ ॥ 26

"ಇದೆ" ಎಂಬ ಅರ್ಥದಲ್ಲಿಯೂ "ಯೋಗ್ಯ" ಎಂಬ ಅರ್ಥದಲ್ಲಿಯೂ ಸತ್ ಎಂಬ ಶಬ್ದವು ಉಪಯೋಗದಲ್ಲಿದೆ. ಅರ್ಜುನ, ಸತ್ ಎಂಬ ಶಬ್ದವು ಶ್ಲಾಘ್ಯವಾದ ಕರ್ಮವೆಂಬ ಅರ್ಥದಲ್ಲಿಯೂ ಪ್ರಯೋಗಿಸಲ್ಪಡುತ್ತದೆ.

ಯಜ್ಞೇ ತಪಸಿ ದಾನೇ ಚ
ಸ್ಥಿತಿಃ ಸದಿತಿ ಚೋಚ್ಯತೇ।
ಕರ್ಮ ಚೈವ ತದರ್ಥೀಯಂ
ಸದಿತ್ಯೇವಾಭಿಧೀಯತೇ ॥ 27

ಯಜ್ಞದಲ್ಲಿಯೂ ತಪಸ್ಸಿನಲ್ಲಿಯೂ ದಾನದಲ್ಲಿಯೂ ತೊಡಗಿರುವಿಕೆಯು ಸತ್ ಎನಿಸುವುದು. ಈಶ್ವರ ಪ್ರೀತ್ಯರ್ಥವಾದ ಕರ್ಮವು ಕೂಡ ಸತ್ ಎಂದೇ ಹೇಳಲ್ಪಡುವುದು.

ಅಶ್ರದ್ಧಯಾ ಹುತಂ ದತ್ತಂ
ತಪಸ್ತಪ್ತಂ ಕೃತಂ ಚ ಯತ್।
ಅಸದಿತ್ಯುಚ್ಯತೇ ಪಾರ್ಥ
ನ ಚ ತತ್ಪ್ರೇತ್ಯ ನೋ ಇಹ ॥ 28

ಅರ್ಜುನ, ಶ್ರದ್ಧೆ ಇಲ್ಲದೆ ಮಾಡಿದ ಹೋಮವೂ ದಾನವೂ ತಪಸ್ಸು ಮತ್ತು ಮಾಡಿದ್ದೆಲ್ಲವೂ ಅಸತ್ (ಅಯೋಗ್ಯ) ಎನಿಸುವುವು. ಅಂಥ ಕರ್ಮವು ಸತ್ತ ಮೇಲಿನ ಫಲವನ್ನು ಕೊಡುವುದೂ ಇಲ್ಲ.

ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ ಶ್ರದ್ಧಾತ್ರಯವಿಭಾಗಯೋಗೋ ನಾಮ ಸಪ್ತದಶೋಽಧ್ಯಾಯಃ ॥

17 ನೆಯ ಅಧ್ಯಾಯವು ಮುಗಿದುದು.



(6 ನೇ ಪುಟದಿಂದ)

ಮ್ಮಿವನೆಂದರ್ಚಿಸಲೊಲ್ದು ಸರ್ವ-
ಮುಖದಿಂದಂ ಪೂಜೆಗೊಂಡಾವಗಂ
ಸುಪಿಲಾಸಂಬಡೆದೊಪ್ಪುವಲ್ಲಮನೆ
ಬೆಚ್ಚಿ ಕೆನ್ನಚಿತ್ತಾಬ್ಜದೊಳ್||

ಎಂದು ದೈವ ಸಮನ್ವಯತೆಯನ್ನು ಸುಂದರವಾಗಿ ನಿರೂಪಿಸಿರುವನು. ಜನತೆಯ ಕವಿ ಸರ್ವಜ್ಞನು "ಒಬ್ಬನಲ್ಲದೆ ಜಗಕೆ ಇಬ್ಬರುಂಟೆ ಮತ್ತೆ | ಒಬ್ಬ ಸರ್ವಜ್ಞ ಕರ್ತನೀ ಜಗಕೆಲ್ಲ | ಒಬ್ಬನೇ ದೈವ ಸರ್ವಜ್ಞ ||" ನೆಂದಿರುವನು. "ದೇವನೊಬ್ಬನು ನಾಮ ಹಲವು" ಎಂದು ಬಸವೇಶ್ವರರ ಅಮೃತ ವಾಣಿಯಾದರೆ, "ಎತ್ತನೇರಿದ ಕರ್ತನೊಬ್ಬನೆ ಜಗಕೆಲ್ಲ" ಎಂಬುದ ದೇವರ ದಾಸಿಮಯ್ಯನ ನುಡಿಮುತ್ತಾಗಿದೆ. ಪ್ರಸಿದ್ಧ ಕವಿ ಡಾ|| ಡಿ.ವಿ.ಜಿ. ಯವರು ತಮ್ಮ ಮಂಕುತಿಮ್ಮನಕಗ್ಗದಲ್ಲಿ "ನೂರಾರು ಮತವಿಹುವು ಲೋಕದುಗ್ರಾಣದಲಿ | ಆರಿಸಿಕೊ ನಿನ್ನ ರುಚಿಗೊಪ್ಪುವುದನದರೊಳ್ || ಸಾರದಡುಗೆಯನೊಳವಿಚಾರದೊಲೆಯಿಂ ಮಾಡು ಬೇರೆ ಮತಿ ಬೇರೆ ಮತ" ಎಂದಿರುವರು, ಹಾಗೆಯೇ ತಮ್ಮ ಮರುಳು ಮುನಿಯನ ಕಗ್ಗದಲ್ಲಿ "ಜಾತಿ ಮತ ಕುಲ ಭೇದ ಲೋಕ ಕಾರ್ಯದಿ ಗಣ್ಯ | ಪ್ರೀತಿ ನೀತಿಗಳು ಸುಖ ದುಃಖ ಭಯಗಳಲಿ || ಜಾತರೆಲ್ಲರುಮೊಂದೆ ಭೇದಂಗಳೇನುಂಟು | ಆತುಮದ ಅನುಭವದೆ" ಎಂದಿರುವುದೂ ಸಹಬಾಳ್ವೆಯ ಒಳ್ಳಿತನ್ನು ಜನಮನದಲ್ಲಿ ಬಿತ್ತರಿಸುತ್ತವೆ.

ವಿಶಿಷ್ಟಾದ್ವೈತ ಸಿದ್ಧಾಂತದಲ್ಲಿ ಖ್ಯಾತರೆನಿಸಿದ ಶ್ರೀ ವೇಂಕಟನಾಥರು ವಿರಚಿಸಿರುವ ಸಂಕಲ್ಪ ಸೂರ್ಯೋದಯ ನಾಟಕದಲ್ಲಿರುವ ಒಂದು ಶ್ಲೋಕವು ಒಂದೇ ಕುಟುಂಬದ ಜನರು ಬೇರೆ, ಬೇರೆ ಮತಗಳನ್ನು ಅವಲಂಬಿಸಿದ್ದುದನ್ನು ಸೂಚಿಸುತ್ತದೆ.

ಶ್ವಶ್ರೂರಸ್ಯ ದಿಗಂಬರ ವ್ರತವತೀ
ಸಂಬಂಧಿನಃ ಸೌಗತಾಃ
ಮಾತಾ ಚಾಸ್ಯ ಪಿತಾ ಚ ಪಾಶುಪತಿನೌ
ವೈದೇಶಿಕೋ ದೇಶಿಕಃ |
ಜಾಯಾ ತಿಷ್ಠತಿ ಸಾಂಖ್ಯಯೋಗ
ಸಮಯೇ ಚಾರ್ವಾಕ ಶಿಷ್ಯಸ್ಸಖಾ
ಮಿಥ್ಯಾಚಾರ ಸಮಾಹ್ವಯ ಸ್ಸ್ವಯ
ಮಸೌ ವಿಪ್ಲಾವಕೋ ವೈದಿಕಃ ||
(ಸಪ್ತಗಿರಿ. ದಶಂಬರ. 1981)

ದ. ಕ. ಜಿಲ್ಲೆಯ ಪ್ರಸಿದ್ಧ ಹರಿದಾಸರೊಬ್ಬರಾದ ಶೇಣಿ ಗೋಪಾಲಕೃಷ್ಣ ಭಟ್ಟರು ತಮ್ಮ ಯಕ್ಷಗಾನ ಕೃತಿ ಶ್ರೀಮತೀಪರಿಣಯದ ನಾಂದೀಪದ್ಯದಲ್ಲಿ

ಆವಂ ಶೈವ ಸಮಾಜದಿಂದೆ ಶಿವನೆಂ
ಬಾಧಿಕ್ಯದಿಂ ಪೂಜೆಯಂ |
ಆವಂ ವೈಷ್ಣವರಿಂದೆ ವಿಷ್ಣು
ನಿಜನೆಂದಾವಾಗಳುಂ ಸೇವೆಯಂ||
ಆವಂ ಜ್ಞಾನಿಗಳಿಂದಲಾತ್ಮನೆನಿಸುತ್ತಂ
ಧ್ಯಾನಮಂ ಕೈಗೊಳು-|
ತ್ತಾವಂ ಲೋಕವ ಕಾವನಾ
ಕಣಿಪುರೇಶಂ ಕಾಯಲಿಮ್ಮಂ ಸದಾ ||

ಎಂದಿರುವುದು ಹನುಮ ಕವಿಯ ಪದ್ಯದಿಂದ ಸ್ಫೂರ್ತಿ ಪಡೆದಂತಿದೆ. ಸಾಹಿತ್ಯಾವಲೋಕನದಿಂದ ಇಂತಹ ನೂರಾರು ಪದ್ಯಗಳು ಕಾಣಸಿಗಬಹುದು. ಲಬ್ಧವಾದ ಕೆಲವು ಸುರಸ ಪದ್ಯಗಳು ಇಲ್ಲಿವೆ. ದೇಶದ ಸಮಗ್ರತೆಯನ್ನು ಕಾಪಾಡುವಲ್ಲಿ ಇಂತಹ ಪದ್ಯಗಳು ಕೆಲವರಿಗಾದರೂ ಬೋಧಪ್ರದವಾಗಲಿ, ಎಂದು ಹಾರೈಸೋಣ.

---



# ತೀರ್ಥಕ್ಷೇತ್ರ ದರ್ಶನ

## ಮೈಸೂರು ಅಧಿದೇವತೆ ಚಾಮುಂಡೇಶ್ವರಿ

ಹಿಂದೂ ಧರ್ಮವು ಹತ್ತಾರು ಸಂಪ್ರದಾಯಗಳ ಹಾಗೂ ದೇವರುಗಳ, ಸಿದ್ಧಾಂತಗಳ ಸಮೂಹ. ಪುರುಷದೇವರುಗಳ ಹಾಗೂ ಸ್ತ್ರೀದೇವತೆಗಳ ಉಪಾಸನೆಯೂ ಭಾರತದಲ್ಲಿ ವೈವಿಧ್ಯಮಯ.

ಸ್ತ್ರೀದೇವತೆಗಳ ಪೈಕಿ ಶಕ್ತಿದೇವತೆ ಅಥವಾ ಮಹಾಲಕ್ಷ್ಮಿಯು ಬಂಗಾಲದಲ್ಲಿ ಕಾಳಿ, ವಿದ್ಯಾವರ್ಧಿನಿಯಾಗಿ ಉತ್ತರಪ್ರದೇಶದಲ್ಲಿ, ಕಲ್ಯಾಣಿಯಾಗಿ ಗುಜರಾತಿನಲ್ಲಿ, ಭವಾನಿಯಾಗಿ ಮಹಾರಾಷ್ಟ್ರದಲ್ಲಿ, ಮೀನಾಕ್ಷಿಯಾಗಿ ತಮಿಳುನಾಡಿನಲ್ಲಿ, ಭಗವತಿಯಾಗಿ ಕೇರಳದಲ್ಲಿ ಹಾಗೂ ಚಾಮುಂಡೇಶ್ವರಿಯಾಗಿ ಕರ್ನಾಟಕದಲ್ಲಿ ಪೂಜಿಸಲ್ಪಡುತ್ತಾಳೆ.

ಕರ್ನಾಟಕದಲ್ಲಿ ಪ್ರಸಿದ್ಧ ಚಾಮುಂಡೇಶ್ವರಿ ದೇಗುಲವು ಮೈಸೂರಿನ ಆಗ್ನೇಯ ದಿಕ್ಕಿನಲ್ಲಿ ೧೩ ಕಿ. ಮೀ. ದೂರದಲ್ಲಿ ಬೆಟ್ಟದ ಮೇಲೆ ನಿರ್ಮಿಸಲ್ಪಟ್ಟಿದೆ. ಸಮುದ್ರಮಟ್ಟದಿಂದ ೩೪೮೯ ಅಡಿ ಎತ್ತರದಲ್ಲಿ ನಯನ ಮನೋಹರ ಪರಿಸರದಲ್ಲಿ ನಿರ್ಮಿಸಲ್ಪಟ್ಟ ದೇಗುಲವನ್ನು ೧೦೦೦ ಮೆಟ್ಟಲುಗಳ ಮೂಲಕವೂ ಅಥವಾ ವಾಹನಗಳ ಮೂಲಕವೂ ಸೇರಬಹುದಾಗಿದೆ.

ಈ ದೇಗುಲಕ್ಕೆ ಸಂಬಂಧಿಸಿದ ಸ್ಥಳ ಮಹಾತ್ಮೆಯಂತೆ ಮಹಿಷಾಸುರನೆಂಬ ದೈತ್ಯ ರಾಜನು ಬ್ರಹ್ಮನನ್ನು ಕುರಿತು ತಪಸ್ಸು ಮಾಡಿ ಬ್ರಹ್ಮನನ್ನು ಒಲಿಸಿಕೊಂಡು ಯಾವುದೇ ದೇವ ಅಥವಾ ಮಾನವರಿಂದಲೂ ತಂದೆತಾಯಂದಿರ ಮೂಲಕ ಜನ್ಮ ತಳೆದವರಿಂದಲೂ ಮರಣ ಬಾರದಿರಲೆಂಬ ವರ ಪಡೆದು ವರಮದದಿಂದ ಮೂರುಲೋಕಕ್ಕೂ ಉಪಟಳ ಕೊಡುತ್ತಿದ್ದಾಗ ಅದರಿಂದಾಗಿ ಕಂಗೆಟ್ಟ ದೇವತೆಗಳು ಬ್ರಹ್ಮ, ವಿಷ್ಣು ಹಾಗೂ ಶಿವನ ಮೊರೆಹೊಕ್ಕರು. ನೊಂದ ದೇವತೆಗಳ ಆರ್ತನಾದಕ್ಕೆ ಓಗೊಟ್ಟ ತ್ರಿಮೂರ್ತಿಗಳ ಕೋಪಾಗ್ನಿಯಿಂದ ಉದ್ಭವಿಸಿದ ಕಿರಣಗಳಿಂದ ಹುಟ್ಟಿದ ಎಂಟು ಕೈಗಳಿಂದ ಶೋಭಿಸುತ್ತಿರುವ ಶಕ್ತಿದೇವತೆಗೆ ಚಾಮುಂಡೇಶ್ವರಿಗೆ ದೇವಾದಿದೇವತೆಗಳು ತಮ್ಮ ವಿಶಿಷ್ಟಶಕ್ತಿಯನ್ನು ಧಾರೆಯೆರೆದರು. ಶಿವನು ತ್ರಿಶೂಲವನ್ನೂ, ವಿಷ್ಣುವು ಸುದರ್ಶನ ಚಕ್ರವನ್ನೂ ಕುಬೇರನು ಗದೆಯನ್ನೂ, ಇಂದ್ರನು ವಜ್ರಾಯುಧವನ್ನೂ, ವಾಯುವು ಬಿಲ್ಲನ್ನೂ, ಸೂರ್ಯನು ಬಾಣವನ್ನೂ, ಪರ್ವತರಾಜನು ಸಿಂಹವನ್ನು ವಾಹನವಾಗಿತ್ತರು. ಹೀಗೆ ವಿಶೇಷ ಶಕ್ತಿಯನ್ನು ಹೊಂದಿದ ಚಾಮುಂಡೇಶ್ವರಿಯು ಮಹಿಷಾಸುರನೊಂದಿಗೆ ಬೀಭತ್ಸ ಯುದ್ಧದಲ್ಲಿ ತೊಡಗಿದಳು. ಯುದ್ಧದ ಹತ್ತನೇ ದಿನದಂದು ಮಹಿಷದ ಮೇಲೇರಿಬಂದ ಮಹಿಷಾಸುರನನ್ನು ತ್ರಿಶೂಲದಿಂದ ಎದೆಗೆ ಹೊಡೆದು ಹಾಗೂ ಸುದರ್ಶನದಿಂದ ತಲೆಯನ್ನು ಕತ್ತರಿಸಿ ಪರಿಹರಿಸಿದಳು. ಬ್ರಹ್ಮನಿತ್ತ ವರದಂತೆ ಆಕೆಯು ಪುರುಷದೇವರಾಗಿರದೆ ಹಾಗೂ ತಂದೆತಾಯಂದಿರಿಂದ ಜನ್ಮ ಪಡೆದವಳಾಗಿರದೆ, ಸಂಹರಿಸುವುದು ಸಾಧ್ಯವಾಯಿತು ಈ ಕಥೆಗೆ ಸಂಬಂಧಿಸಿದಂತೆ ಮಹಿಷನ ಊರು-ಮೈಸೂರಾಗಿ ನಾಮಧೇಯವನ್ನು ಪಡೆಯಿತೆನ್ನುವುದು ಸ್ಥಳಪುರಾಣ.

ಐತಿಹಾಸಿಕ ದೃಷ್ಟಿಕೋನದಿಂದ ವಿವೇಚಿಸಿದಾಗ ತಿಳಿದುಬರುವಂತೆ ಬೆಟ್ಟದ ಮೇಲಿರುವ ಅತ್ಯಂತ ಪ್ರಾಚೀನ ಮಹಾಬಲೇಶ್ವರ ಗುಡಿಯನ್ನು ಕ್ರಿ.ಶ ೧೧೨೮ ರಲ್ಲಿ ಹೊಯ್ಸಳರಾಜ ವಿಷ್ಣುವರ್ಧನನು ಕಟ್ಟಿಸಿದನೆಂದೂ, ಭವ್ಯ ಚಾಮುಂಡೇಶ್ವರಿ ದೇವಾಲಯವು ಹನ್ನೆರಡನೇ ಶತಮಾನಕ್ಕೆ ಸೇರಿದುದೆಂದೂ ಇತಿಹಾಸಜ್ಞರ ಅಭಿಪ್ರಾಯ.

ಬೆಟ್ಟದ ಮೇಲೇರುವ ೧೦೦೦ ಮೆಟ್ಟಲುಗಳನ್ನು ಮೈಸೂರು ರಾಜರಾದ ದೊಡ್ಡದೇವರಾಜ ಒಡೆಯರವರು ೧೬೬೪ ರಲ್ಲಿ ನಿರ್ಮಿಸಿದರೆಂದೂ, ಹಾಗೂ ಕ್ರಿ. ಶ. ೧೮೨೭ ರಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರವರು ದೇವಾಲಯ ಹಾಗೂ ಇತರ ಜೀರ್ಣೋದ್ಧಾರ ಕಾರ್ಯ ನಿರ್ವಹಿಸಿದರೆಂದೂ, ಅಲ್ಲದೇ ಗೋಪುರವನ್ನು ನಿರ್ಮಿಸಿದರೆಂದೂ, ಇತಿಹಾಸದ ಮೂಲಕ ವ್ಯಕ್ತವಾಗುತ್ತದೆ. ಶಿಲ್ಪಕಲೆಯ ಅತ್ಯುತ್ತಮ ಶೈಲಿಯನ್ನು ನಾವು ಶ್ರೀದೇವಿ ಚಾಮುಂಡೇಶ್ವರಿಯಲ್ಲಿ ನೋಡ

ಶ್ರೀ ಕೋಟೇಶ್ವರ
ಸೂರ್ಯನಾರಾಯಣರಾವ್

ಬಹುದು. ರಾಜವಂಶೀಯರಿಂದ ನೀಡಲ್ಪಟ್ಟ ಅನರ್ಘ ರತ್ನಾಭರಣಗಳಿಂದ ಅಲಂಕರಿಸಲ್ಪಟ್ಟ ದೇವಿಯ ಮೂರ್ತಿ ಬಲುರಮ್ಯ.

೧೮೪೪ ಮುಮ್ಮಡಿ ಕೃಷ್ಣರಾಜ ಒಡೆಯರವರು ಬೆಳ್ಳಿಯ ವಾಹನಗಳನ್ನೂ, ಹಾಗೂ ರತ್ನಖಚಿತ "ನಕ್ಷತ್ರಮಾಲಿಕಾ" ಎಂಬ ರತ್ನ ಹಾರವನ್ನು ಅರ್ಪಿಸಿದರು. ನಕ್ಷತ್ರ ಮಾಲಿಕೆಯ ವಿಶೇಷವೇನೆಂದರೆ, ಮುವತ್ತು ಸಂಸ್ಕೃತ ಶ್ಲೋಕಗಳನ್ನು ಅದರಲ್ಲಿ ಕೆತ್ತಲಾಗಿದೆ.

ದೇಗುಲವಿರುವ ಬೆಟ್ಟವಿಳಿದು ಬರುವಾಗ ಸಾಧಾರಣ ಇಪ್ಪತ್ತೈದು ಅಡಿ ಉದ್ದ ಹಾಗೂ ೧೬ ಅಡಿ ಎತ್ತರವಿರುಯ ಏಕಶಿಲಾ ಕೆತ್ತನೆಯ ನಂದಿಯನ್ನು ನೋಡಬಹುದು. ಆಕಾರದಲ್ಲಿ ಲೇಪಾಕ್ಷಿಯ ನಂದಿಗೆ ಎರಡನೆಯದಾಗಿರುವ ಇದು ಮೈಸೂರಿನ ಆಳಿದ ಮಹಾರಾಜ ದೇವರಾಜ ಒಡೆಯರವರಿಂದ ೧೬೬೪ರಲ್ಲಿ ಸ್ಥಾಪಿಸಲ್ಪಟ್ಟಿತು. ಭಕ್ತಾದಿಗಳು ತೆಂಗಿನಕಾಯಿ, ಹಣ್ಣುಗಳಿಂದ ನೈವೇದ್ಯ ಮಾಡುವ ಕ್ರಮವೂ ಉಂಟು.

ನವರಾತ್ರಿಯಲ್ಲಿ ಆಳರಸರ ಕಾಲದಲ್ಲಿ ಅತ್ಯಂತ ವಿಜೃಂಭಣೆಯಿಂದ ಆಚರಿಸಲ್ಪಡುತ್ತಿದ್ದ ದಸರಾ ಮಹೋತ್ಸವವು ದೇಶ ವಿದೇಶಗಳಿಂದ ಪ್ರವಾಸಿಗರನ್ನು ಆಕರ್ಷಿಸುತ್ತಿತ್ತು. ಇಡಿ ಭಾರತದಲ್ಲಿಯೇ ವಿಶಿಷ್ಟ ರೀತಿಯಲ್ಲಿ ಆಚರಿಸಲ್ಪಡುವ ದಸರಾದಲ್ಲಿ ಮಹಾರಾಜರು ಆನೆಯ ಅಂಬಾರಿಯಲ್ಲಿ ಕುಳಿತು ಮೈಸೂರು ಅರಮನೆಯಿಂದ ಮೂರು ಮೈಲಿ ದೂರದಲ್ಲಿರುವ ಬನ್ನಿಮಂಟಪಕ್ಕೆ ಮೆರವಣಿಗೆ ಹೋಗುವ ಸಂಪ್ರದಾಯವಿತ್ತು. ಈಗ ಕಾಲ ಬದಲಾದಂತೆ ಚಾಮುಂಡೇಶ್ವರಿಯ ಉತ್ಸವ ಮೂರ್ತಿಯನ್ನು ಮಹಾರಾಜರ ಬದಲಿಗೆ ಅಂಬಾರಿಯಲ್ಲಿ ಕರೆದೊಯ್ಯುವ ಕ್ರಮವು ಆರಂಭವಾಯಿತು. ಚಾಮುಂಡೇಶ್ವರಿಯನ್ನು ಕನ್ನಡ ಭುವನೇಶ್ವರಿಯೆಂಬ ನಾಮಧೇಯದಿಂದ ಕರೆಯುವ ವಾಡಿಕೆ ಆರಂಭವಾಗಿದೆ. ದಸರಾ ಉತ್ಸವದ ಮುಂಚೆ ಹಾಗೂ ಆ ನಂತರದ ಸಾಧಾರಣ ಒಂದು ತಿಂಗಳಿನ ವರೆವಿಗೆ ಮೈಸೂರಿಗೆ ಮೈಸೂರೇ ಹಬ್ಬದ ಸಂಭ್ರಮದಲ್ಲಿ ಓಲಾಡುವುದು ಮೈಸೂರಿಗರಿಗೆ ಹೆಮ್ಮೆಯ ವಿಷಯ.

---

(28 ನೇ ಪುಟದಿಂದ)

ಕನ್ನಡದ ನಾಗಚಂದ್ರ ಕವಿಯ ರಾಮಾಯಣದಲ್ಲಿ ಬರುವ ಉಪರಂಭೆಯ ಪ್ರಸಂಗವನ್ನು ರಾವಣನ ಉದಾತ್ತಗುಣವನ್ನು ಹೇಳುವ ಸಂದರ್ಭದಲ್ಲಿ ಈತನೂ ತಂದಿದ್ದಾನೆ.

ಕೃಷ್ಣತಂಬಿ ಅನೇಕ ಆಟ್ಟಕಥೆಗಳನ್ನು ಬರೆದಿದ್ದಾನೆ. ಅವುಗಳಲ್ಲಿ 'ತಾಟಕವಧೆ'ಯೇ ಬಹಳ ಮುಖ್ಯವಾದುದು. ರಾಮ ತಾಟಕಿಯನ್ನು ಸಂಹರಿಸಿದ ಸರಳಸಂದರ್ಭವನ್ನು ತೆಗೆದುಕೊಂಡು ಸುಂದರವಾದ ನಾಟಕವನ್ನು ಹೆಣೆದಿದ್ದಾನೆ.

'ಲಂಕಾಮರ್ದನ ತುಳ್ಳಲ್' – ಎಂಬ ಕೃತಿಯ ಕರ್ತೃ ಯಾರೆಂದು ತಿಳಿಯದು. ಕುಂಜನ್ ನಂಬಿಯಾರ್ ಇದರ ಕರ್ತೃ ಎಂದು ಹೇಳುತ್ತಾರೆ. ಇದರ ಶೈಲಿಯನ್ನು ಗಮನಿಸಿ ವಿದ್ವಾಂಸರು ಆತನದಲ್ಲ ಎಂದಿದ್ದಾರೆ. ಇದರಲ್ಲಿರುವ ಹಲವಾರು ಸಂದರ್ಭಗಳು ಎಳುತ್ತಚ್ಛನ್ ಮತ್ತು ಕುಂಜನ್ ನಂಬಿಯಾರರಿಂದ ರೂಪಾಂತರ ಹೊಂದಿದಂಥವು.

19 ನೆಯ ಶತಮಾನದ ಸಾಂಪ್ರದಾಯಿಕ ಕಾಲದಿಂದ 20 ನೆಯ ಶತಮಾನದ ಆಧುನಿಕ ಕಾಲದ ನಡುವೆ ಮಲಯಾಳ ಸಾಹಿತ್ಯದಲ್ಲಿ ಮಹಾಕಾವ್ಯಗಳ ಇನ್ನೊಂದು ಕಾಲವಿದೆ. ಈ ಕಾಲದಲ್ಲಿ ಅಳಕತ್ತು ಪದ್ಮನಾಭ ಕುರುಪ್ (1902) 'ರಾಮಚಂದ್ರ ವಿಲಾಸಂ' ಎಂಬ ಕೃತಿ ರಚಿಸಿದ. ಮಲಯಾಳ ಸಾಹಿತ್ಯದಲ್ಲಿ ಮಹಾಕಾವ್ಯಗಳ ಬಗೆಗೆ ಪ್ರಸ್ತಾಪ ಮಾಡಿರುವ ಮೊಟ್ಟಮೊದಲ ಕವಿ ಈತ.

ವಟಕ್ಕುಂಕೂರ್ ರಾಜರಾಜವರ್ಮನ 'ರಾಘವಾಭ್ಯುದಯಂ'. 'ರಘುವೀರ ವಿಜಯಂ' – ಮುಂತಾದವು ಈ ಕಾಲದಲ್ಲಿ ರಚಿತವಾದ ರಾಮಾಯಣ ವಸ್ತುವುಳ್ಳ ಮಹಾಕಾವ್ಯಗಳು.

ಒಟ್ಟಿನಲ್ಲಿ ಮಲಯಾಳ ಸಾಹಿತ್ಯವೂ ಭಾರತೀಯಾತ್ಮದಂತಿರುವ ರಾಮಾಯಣ ಕಥಾಸೂತ್ರವನ್ನು ಹಿಡಿದು ತನ್ನ ಪರಿಸರಕ್ಕೆ ತಕ್ಕಂತೆ ಅದನ್ನು ರೂಪಿಸಿಕೊಂಡಿದೆ ಎನ್ನುವುದು ಇದರಿಂದ ಗೊತ್ತಾಗುತ್ತದೆ.

---




## ಬಂಗಾರದ ಯಜ್ಞೋಪವೀತ ಕಾಣಿಕೆ

ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯದಲ್ಲಿ ಸೆಪ್ಟೆಂಬರ್ 23ರ ಶನಿವಾರ ಭಕ್ತರೊಬ್ಬರು ದೈವಕ್ಕೆ ಬಂಗಾರದ ಯಜ್ಞೋಪವೀತವನ್ನು ಕಾಣಿಕೆಯಾಗಿ ನೀಡಿದ್ದು ವರದಿಯಾಗಿದೆ. ಈ ಯಜ್ಞೋಪವೀತದ ಬೆಲೆ ಸುಮಾರು 80 ಸಾವಿರ ರೂಗಳಿರಬಹುದು ಎಂದು ಹೇಳಲಾಗಿದೆ. ಇದ ರೊಂದಿಗೇ ಭಕ್ತರು ಎರಡು ಚಿನ್ನದ ಮಂಗಳ ಸೂತ್ರಗಳನ್ನೂ ನೀಡಿದ್ದು, ಇವುಗಳನ್ನು ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಶ್ರೀದೇವಿ ಭೂದೇವಿ ಯರಿಗೆ ಅಲಂಕರಿಸಲಾಗುವುದೆಂದು ತಿಳಿದು ಬಂದಿದೆ.

## ತಿರುಮಲೆಗೆ ರಾಜ್ಯಗೃಹಮಂತ್ರಿ

ಇದೇ ಸೆಪ್ಟೆಂಬರ್ ೨೭ ರಂದು ತಿರುಮಲೆಗೆ ಆಂಧ್ರಪ್ರದೇಶದ ಗೃಹಶಾಖಾಮಂತ್ರಿ ಶ್ರೀ ಜಿ. ಹರಿರಾಮಜೋಗಯ್ಯ ಅವರು ಕುಟುಂಬ ಸಹಿತರಾಗಿ ಆಗಮಿಸಿ ಸ್ವಾಮಿಯನ್ನು ಸಂದರ್ಶಿಸಿ ಆರಾಧಿಸಿದರು. ಮಾನ್ಯ ಮಂತ್ರಿಗಳನ್ನು ಆಲಯ ಮರ್ಯಾದೆಗಳೊಡನೆ ಸ್ವಾಗತಿಸಿದ ಕಾರ್ಯ ನಿರ್ವಹಣಾಧಿಕಾರಿ ಶ್ರೀ ಜಿ. ಕುಮಾರಸ್ವಾಮಿರೆಡ್ಡಿ ಅವರು ದೇವಾಲಯದ ಈಚಿನ ಕಾರ್ಯಕ್ರಮ ಗಳನ್ನು ಪರಿಚಯಿಸಿ ಕೊಟ್ಟರು.

## ಚೈತನ್ಯ ಉತ್ಸವ

ಭಕ್ತಿ ಪಂಥದ ಮುಖ್ಯ ಹರಿಕಾರರಲ್ಲಿ ಒಬ್ಬರಾದ ಶ್ರೀ ಚೈತನ್ಯರ ಐದುನೂರನೇ ವಾರ್ಷಿಕೋತ್ಸವ ವನ್ನು ತಿರುಪತಿಯ ಅನ್ನಮಾಚಾರ್ಯ ಕಲಾ ಮಂದಿರದಲ್ಲಿ ಆಚರಿಸಲಾಯಿತು. ಭಕ್ತಿತತ್ತ್ವದ ಶ್ರೇಷ್ಠತೆಯನ್ನೂ ಅಗತ್ಯವನ್ನೂ ಕುರಿತು ಗೌಡೀಯ ಮಠದ ಶ್ರೀ ಶ್ರೀ ತ್ರಿದಂಡಿ ಸ್ವಾಮಿ ಚೈತನ್ಯ ಮಹಾಪ್ರಭುಗಳು ಉಪನ್ಯಾಸಮಾಡಿದರು. ತಿ. ತಿ. ದೇ. ಪೌರಸಂಬಂಧಾಧಿಕಾರಿ ಶ್ರೀ ರಾವುಲ ಸೂರ್ಯನಾರಾಯಣ ಮೂರ್ತಿ ಹಾಗೂ ಹಿಂದೂ ಧರ್ಮ ರಕ್ಷಣ ಸಂಸ್ಥೆಯ ಕಾರ್ಯದರ್ಶಿ ಶ್ರೀ ಸಮುದ್ರಾಲ ಲಕ್ಷ್ಮಣಯ್ಯ ಅವರುಗಳೂ ಮಾತನಾಡಿದರು.

## ತಿರುಮಲೆಯಲ್ಲಿ ರಾಜಾಸ್ಥಾನದ ಮುಖ್ಯಮಂತ್ರಿ

ತಿರುಮಲೆಗೆ ರಾಜಾಸ್ಥಾನದ ಮುಖ್ಯಮಂತ್ರಿ ಶ್ರೀ ಶಿವಚರಣ ಮಾಥುರ್ ಅವರು ಕುಟುಂಬ ಸಹಿತ ಆಗಮಿಸಿ ಶ್ರೀನಿವಾಸನನ್ನು ಸಂದರ್ಶಿಸಿ ಆಶೀರ್ವಾದ ಪಡೆದರು. ಅವರನ್ನು ತಿ ತಿ. ದೇ. ಸಹ ಕಾರ್ಯನಿರ್ವಹಣಾಧಿಕಾರಿ ಶ್ರೀ ಜಿ. ವೆಂಕಟೇಶ್ವರುಲು ಅವರು ಸ್ವಾಗತಿಸಿ ಆಲಯ ಚರಿತ್ರೆಯನ್ನೂ, ತಿ. ತಿ. ದೇ. ಕಾರ್ಯಕ್ರಮ ಗಳನ್ನೂ ವಿವರಿಸಿದರು.

ತಿರುಮಲೆಯಲ್ಲಿನ ನೈರ್ಮಲ್ಯ, ಆರೋಗ್ಯದ ವಾತಾವರಣಗಳನ್ನು ನೋಡಿ ಸಂತಸಪಟ್ಟ ಶ್ರೀ ಮಾಥುರ್ ಅವರು ರಾಜಾಸ್ಥಾನದ ಜೈಪುರದಲ್ಲೂ ಇತರ ನಗರಗಳಲ್ಲಿಯಂತೆ ತಿ. ತಿ. ದೇ. ಕಲ್ಯಾಣ ಮಂಟಪ ನಿರ್ಮಾಣವಾಗಬೇಕೆಂದೂ, ಅದಕ್ಕೆ ತಕ್ಕ ಸ್ಥಳವನ್ನು ತಾವು ನೀಡುವುದಾಗಿಯೂ ತಿಳಿಸಿದರು.

## ತಿರುಮಲೆಗೆ ರಾಜಾಸ್ಥಾನದ ರಾಜ್ಯಪಾಲರು

ರಾಜಸ್ಥಾನದ ರಾಜ್ಯಪಾಲ ಶ್ರೀ ಓ. ಪಿ. ಮೆಹ್ರು ಅವರು ತಿರುಮಲೆಗೆ ಸಕುಟುಂಬ ಆಗಮಿಸಿ ಸ್ವಾಮಿಯ ಸೇವೆ, ದರ್ಶನಗಳಲ್ಲಿ ಭಾಗವಹಿಸಿ ಆನಂದ ಹೊಂದಿದರು. ಕಾರ್ಯನಿರ್ವಹಣಾಧಿ ಕಾರಿ ಶ್ರೀ ಜಿ. ಕುಮಾರಸ್ವಾಮಿರೆಡ್ಡಿ ಅವರು ರಾಜ್ಯಪಾಲರನ್ನು ಸ್ವಾಗತಿಸಿದರು.

## ಬಳ್ಳಾರಿಯಲ್ಲಿ ದಾಸಸಾಹಿತ್ಯ ಪ್ರದರ್ಶನ

ಬಳ್ಳಾರಿಯ ಸೆಂಟೆನರಿ ಹಾಲ್‌ನಲ್ಲಿ ನಾಲ್ಕು ದಿನಗಳ ಕಾಲ ಅತ್ಯಂತ ಜನಪ್ರಿಯವಾಗಿ ದಾಸ ಸಾಹಿತ್ಯ ವಸ್ತುಪ್ರದರ್ಶನ ಸೆಪ್ಟಂಬರಿನಲ್ಲಿ ನಡೆಯಿತು.

ಸ್ಥಳೀಯ ಶಾಸಕ ಶ್ರೀ ಎಂ. ರಾಮಪ್ಪ ಅವರ ಅಧ್ಯಕ್ಷತೆಯಲ್ಲಿ ವಾಣಿಜ್ಯ ಮಂಡಲಿ ಅಧ್ಯಕ್ಷ ಶ್ರೀ ಕೆ. ತಿಮ್ಮಪ್ಪ ಅವರು ದಾಸಸಾಹಿತ್ಯ ವಸ್ತು ಪ್ರದರ್ಶನವನ್ನು ಉದ್ಘಾಟಿಸಿದರು. ಮುಖ್ಯ ಅತಿಥಿಯಾಗಿ ಆಗಮಿಸಿದ ಜಿಲ್ಲಾ ನ್ಯಾಯಾಧೀಶ ಶ್ರೀ ಎಸ್. ಟಿ. ಹೋಗಾರ್ ಅವರು ಇಂದಿನ ಆಂದೋಳಿತ ಪರಿಸ್ಥಿತಿಗಳಲ್ಲಿ ಧರ್ಮದತ್ತ ಮಾರ್ಗ ದರ್ಶನಕ್ಕಾಗಿ ತಿರುಗುವುದರ ಅಗತ್ಯವನ್ನು ಅವ ಧಾರಿಸಿದರು. ಕೋಲಾರ ರಾಮರಾವ್ ಅವರ ಸ್ವಾಗತಿಸಿದ ಉದ್ಘಾಟನಾಸಭೆಯನ್ನು ಶ್ರೀ ಕೌತಾಳ ಅಪ್ಪಣ್ಣಾಚಾರ್ಯರು ವಂದಿಸಿದರು.

ದಾಸಸಾಹಿತ್ಯ ವಸ್ತು ಪ್ರದರ್ಶನದ ಅಂಗವಾಗಿ ವಿಶೇಷ ಸಾಂಸ್ಕೃತಿಕ ಕಾರ್ಯಕ್ರಮಗಳೂ ಏರ್ಪಾಡಾಗಿದ್ದು, ತಿ. ತಿ. ದೇ. ಧಾರ್ಮಿಕ ಪ್ರಕಟನೆಗಳ ಮಾರಾಟವೂ ಯಶಸ್ವಿಯಾಯಿತು. ಈ ಸಂದರ್ಭದಲ್ಲಿ ಏರ್ಪಡಿಸಿದ್ದ ಶ್ರೀನಿವಾಸ ವಿಗ್ರಹದ ರಥೋತ್ಸವ ಬಳ್ಳಾರಿಯ ರಥಬೀದಿಯಲ್ಲಿ ಅತ್ಯಂತ ಹೆಚ್ಚಿನ ಜನರ ಪೂಜೆ ಪುರಸ್ಕಾರಗಳನ್ನು ಪಡೆಯಿತು.

ಇದೇ ರೀತಿಯ ವಸ್ತುಪ್ರದರ್ಶನಗಳನ್ನು ಹುಬ್ಬಳ್ಳಿ, ಬೊಂಬಾಯಿ, ಹೈದರಾಬಾದುಗಳಲ್ಲಿ ಈ ವರ್ಷದಲ್ಲಿ ನಡೆಸಲಾಗುವುದೆಂದು ವರದಿ ಯಾಗಿದೆ.

ಬಳ್ಳಾರಿಯ ಈ ಯಶಸ್ವಿ ವಸ್ತು ಪ್ರದರ್ಶನಕ್ಕೆ ಮಾಜಿ ಎಂ. ಎಲ್. ಎ. ಶ್ರೀ ಜಿ. ಟಿ. ಸತ್ಯ ನಾರಾಯಣ, ಸರ್ವಶ್ರೀ ಎಸ್. ಬ್ರಹ್ಮಯ್ಯ, ತಿರುಮಳಪ್ಪ, ಪುಲಿ ವೆಂಕಯ್ಯ, ಟಿ. ಹನುಮಂತಪ್ಪ ಮೊದಲಾದ ಸ್ಥಳವಂದಿಗರ ಸಹಕಾರವಿದ್ದಿತು, ಹಾಗೂ ದಾಸಸಾಹಿತ್ಯ ಪ್ರಾಜೆಕ್ಟಿನ ವಿಶೇಷಾಧಿಕಾರಿ ಶ್ರೀ ಕೆ. ಅಪ್ಪಣ್ಣಾಚಾರ್ಯ, ಪ್ರಾಜೆಕ್ಟಿನ ಸಲಹಾ ಸಮಿತಿಯ ಸದಸ್ಯರುಗಳಾದ ಶ್ರೀ ಆದ್ಯರಾಮಾಚಾರ್ಯ, ಶ್ರೀ ಶ್ರೀನಿವಾಸ ರಾವ್ ಅವರುಗಳ ಪರ್ಯವೇಕ್ಷಣೆ, ಮಾರ್ಗ ದರ್ಶಿತ್ವಗಳಲ್ಲಿ ನಡೆಯಿತು.

## ಅತಿಹೆಚ್ಚು ಜನವನ್ನು ಆಕರ್ಷಿಸಿದ ಬ್ರಹ್ಮೋತ್ಸವ

ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವವು ಈಬಾರಿ ಸೆಪ್ಟಂಬರ್ ಕೊನೆ ಹಾಗೂ ಅಕ್ಟೋಬರ್ ಮೊದಲ ವಾರದಲ್ಲಿ ನವ ರಾತ್ರಿಯೊಡನೆ ಮಿಳಿತವಾಗಿ ನಡೆದು ಅತಿಹೆಚ್ಚು ಜನವನ್ನು ಆಕರ್ಷಿಸಿ ಹಿಂದಿನ ಎಲ್ಲದಾಖಲೆಗ ಳನ್ನೂ ಹಿಂದಿಕ್ಕಿದೆಯೆಂದು ವರದಿಯಾಗಿದೆ.

ರಥೋತ್ಸವವನ್ನು ಒಂದು ಲಕ್ಷಕೂ ಮೀರಿ ದಂತೆ ಜನ ನೋಡಿದರೆಂದು ಹೇಳಲಾಗಿದೆ. ಅಂದು ಮಳೆಯ ಸೋನೆ ಹಿಡಿದಿದ್ದರೂ ನಾಲ್ಕು ಕಿಲೋ ಮೀಟರಿಗಿಂತ ಹೆಚ್ಚಿನ ಉದ್ದದ ಸರತಿಯ ಸಾಲು ದೇವರ ದರ್ಶನಕ್ಕಾಗಿ ನಿಂತಿದ್ದಿತೆಂದು ಹೇಳಲಾ ಗಿದೆ.

ಅಕ್ಟೋಬರ್ 1 ರಂದು ಮಾತ್ರವೇ ಹುಂಡಿ ಯಿಂದ 8.30 ಲಕ್ಷ ರೂ, ಲಡ್ಡು ವಡೆ ಪ್ರಸಾದ ಗಳಿಂದ 2.5 ಲಕ್ಷ ರೂ ಹಾಗೂ ವಿಶೇಷ ಪ್ರವೇಶ ಟಿಕೆಟ್ ಮಾರಾಟದಿಂದ 2.5 ಲಕ್ಷ ರೂ. ಹೀಗೆ ಒಟ್ಟು 13.3 ಲಕ್ಷ ರೂಗಳ ಆದಾಯ ಉಂಟಾಗಿ ಇದೊಂದು ಹೊಸದಾಖಲೆಯಾಯಿತು.

ಈ ಬಾರಿಯ ವಿಶೇಷವೆಂದರೆ ಗರುಡಸೇವೆಯ ದಿನ ಸ್ವಾಮಿಯವರಿಗೆ ಆಂಧ್ರ ಪ್ರದೇಶಸರ್ಕಾರದ ವತಿಯಿಂದ ಬ್ರಹ್ಮೋತ್ಸವಕ್ಕೆ ಕಾಣಿಕೆಯಾಗಿ ಬರುವ ರೇಷ್ಮೆ ವಸ್ತ್ರಗಳನ್ನು ಆಂಧ್ರದ ರಾಜ್ಯ ಪಾಲ ಡಾ॥ ಶಂಕರ ದಯಾಳ ಶರ್ಮರು ತಂದದ್ದು. ಅಂದು ಸಂಜೆ ಶ್ರೀಯುತರು ಕುಟುಂಬಸಹಿತರಾಗಿ ಆಗಮಿಸಿ ವಸ್ತ್ರಗಳನ್ನು ತಲೆಯ ಮೇಲಿಟ್ಟು ಕೊಂಡು ಸ್ವಾಮಿಗೆ ಅರ್ಪಿಸಿದರು. ಮೂರನೆಯ ದಿನ ಬೆಳಗ್ಗೆ ತಿರುಮಲೆಯ ದೇವಾಲಯದಲ್ಲಿ ಅಂಗಪ್ರದಕ್ಷಿಣೆಯನ್ನೂ (ಉರುಳು ಸೇವೆ) ಮಾಡಿ ದರು. ಅಂದು ಸರ್ವಭೂಪಾಲವಾಹನಕ್ಕೆ ಹೆಗಲು ಕೊಟ್ಟು ಇತರ ಭಕ್ತರೊಡನೆ ಸೇರಿ ಮೆರವಣಿ ಗೆಯನ್ನು ಯಶಸ್ವಿಗೊಳಿಸಿದರು.

ಬ್ರಹ್ಮೋತ್ಸವಗಳ ಸಂದರ್ಭದಲ್ಲಿ 26-9-84 ರಿಂದ 4-10-84 ರವರೆಗೆ ಸಾಂಸ್ಕೃತಿಕ ಕಾರ್ಯ ಕ್ರಮಗಳೂ ತಿರುಮಲೆಯಲ್ಲಿ ಏರ್ಪಾಡಾಗಿದ್ದವು. ಪ್ರತಿದಿನ ಸಂಜೆ 4 ರಿಂದ 6 ರ ವರೆಗೆ ನಡೆದ ಸಂಗೀತ ಕಚೇರಿಗಳಲ್ಲಿ ಭಾಗವಹಿಸಿ ತಮ್ಮ ಭಕ್ತಿ ರಸಪೂರ್ಣ ಸಂಗೀತದ ಗುಂಜನವನ್ನು ಇಡೀ ತಿರುಮಲೆಯಲ್ಲೆಲ್ಲ ಹರಡಿದವರಲ್ಲಿ ಹಲವರೆಂದರೆ ಸರ್ವಶ್ರೀ ಶ್ರೀಪಾದ ಪಿನಾಕ ಪಾಣಿ, ನೇದುನೂರಿ ಕೃಷ್ಣಮೂರ್ತಿ, ಎಂ. ಎಸ್. ಬಾಲಸುಬ್ರಹ್ಮಣ್ಯ ಶರ್ಮ, ಕಾರೈಕ್ಕುಡಿ ಜಯಮಣಿ ನರಸಿಂಹಂ, ಬಾಲಕೃಷ್ಣ ಪ್ರಸಾದ್, ಶ್ರೀಮತಿ ಎಂ. ಎಲ್. ವಸಂತ ಕುಮಾರಿ, ಕುಮಾರಿ ಶ್ರೀರಂಗಂ ಗೋಪಾ ರತ್ನಂ ಹಾಗೂ ಸರ್ವಶ್ರೀ ಲಾಲ್ಗುಡಿ ಜಯರಾ ಮನ್, ಟಿ. ಎನ್. ಕೃಷ್ಣನ್ (ವಯೋಲಿನ್), ಚಿಟ್ಟಿಬಾಬು (ವೀಣೆ) ಮೊದಲಾದವರು. ಇವು ಗಳೊಂದಿಗೇ ದಿನವೂ ಬೆಳಗ್ಗೆ 6 ಗಂಟೆಗೆ ಗೀತಾ ಪಾರಾಯಣವೂ, 6-30 ರಿಂದ ಉಪನ್ಯಾಸಗಳೂ, 8 ಗಂಟೆಯಿಂದ ಅನ್ನಮಾಚಾರ್ಯ ಸಂಕೀರ್ತ ನೆಯೂ, 10 ಗಂಟೆಯಿಂದ ಹರಿಕಥೆಯೂ, ಸಂಜೆ 7 ಗಂಟೆಗೆ ಉಯ್ಯಾಲೆ ಸೇವೆಯೂ ಏರ್ಪಾಡಾ ಗಿದ್ದು ಅತಿಹೆಚ್ಚು ಜನರನ್ನು ಆಕರ್ಷಿಸಿದವೆನ್ನ ಬೇಕು.

★



ಹನುಮ ವಾಹನವನ್ನು ಹೊತ್ತು ನಡೆದಿರುವ ತಿ. ತಿ. ದೇ ಕಾರ್ಯನಿರ್ವಹಣಾಧಿಕಾರಿ, ರಾಜ್ಯಪಾಲರು ಹಾಗೂ ಇತರರು



ಬ್ರಹ್ಮೋತ್ಸವದಲ್ಲಿ ರೇಷ್ಮೆ ವಸ್ತ್ರವನ್ನು ದೇವರಿಗೆ ಕಾಣಿಕೆಯಾಗಿ ತರುತ್ತಿರುವ ಡಾ॥ ಎಸ್. ಡಿ. ಶರ್ಮ.

